ಶೇಖ್ ಅಬ್ದುಲ್ ಅಝೀಝ್ ಬಿನ್ ಅಬ್ದುಲ್ಲ ಬಿನ್ ಬಾಝ್ (ರ)
ರವರ

# بَيَانُ التَّوحِيد

# ತೌಹೀದ್

## ಅರ್ಥ ಮತ್ತು ವಿವರಣೆ

تاليف

الشيخ عبد العزيز بن عبدالله بن باز (رحمه الله)

ಅನುವಾದ

ಅಬ್ದುಸ್ಸಲಾಮ್ ಕಾಟಿಪಳ್ಳ

(ಸಂಪಾದಕರು 'ಸಿರಾತೇ ಮುಸ್ತಖೀಮ್' ಕನ್ನಡ ಮಾಸಿಕ)

بسم الله الرحمن الرحيم

# بَيَانُ التَّوحِيد

الذى بعث الله به الرسل جميعاوبعث به خاتمهم
محمداصلى الله عليه وسلم

تاليف


الشيخ عبد العزيز بن عبدالله بن باز(رحمه الله)

مفتى عام المملكة العربية السعوديةورئيس هيئة كبار العلماء
وادارة البحوث العلمية والافتاء (سابقا)

ಅನುವಾದ :

**ಅಬ್ದುಸ್ಸಲಾಮ್ ಕಾಟಿಪಳ್ಳ**

(ಸಂಪಾದಕರು : ಸಿರಾತೇ ಮುಸ್ತಖೀಮ್ ಕನ್ನಡ ಮಾಸಿಕ)

ಸರ್ವಸ್ತುತಿಯೂ ಸರ್ವಜ್ಞನಾದ ಅಲ್ಲಾಹನಿಗಾಗಿವೆ. ಅವನಾದರೊ ಸರ್ವ ಜಗತ್ತಿನ ಒಡೆಯನೂ ಪರಿಪಾಲಕನೂ ಆಗಿದ್ದಾನೆ. ಅಕ್ರಮಿಗಳಾದವರಷ್ಟೇ ಅವನ ಮೇರೆಯನ್ನು ಮೀರಿ ನಡೆಯುತ್ತಾರೆ.

ಶಾಂತಿ ಮತ್ತು ಸಮಾಧಾನವು ವರ್ಷಿಸುತ್ತಿರಲಿ, ಅವನ ದಾಸರೂ, ಸಂದೇಶವಾಹಕರೂ, ಅವನ ಸೃಷ್ಠಿಗಳಲ್ಲೇ ಶ್ರೇಷ್ಠರೂ, ಅವನ ಆಪ್ತರೂ ನಮ್ಮೆಲ್ಲರ ಮಾರ್ಗದರ್ಶಕರೂ, ನಾಯಕರೂ, ಕಣ್ಮಣಿಯೂ ಆದರ ಮುಹಮ್ಮದ್(ಸ) ಬಿನ್ ಅಬ್ದುಲ್ಲಾ ಬಿನ್ ಅಬ್ದುಲ್ ಮುತ್ತಲಿಬ್, ಹಾಷಿಮ್, ಅರಬಿ, ಮಕ್ಕಿ ಬಳಿಕ ಮದೀನೀ ರವರ ಮೇಲೆ ಮತ್ತು ಅವರ ಸರ್ವ ಸಹವರ್ತಿಗಳ ಮೇಲೆ ಮತ್ತು ಅವರ ಮಾರ್ಗದರ್ಶನವನ್ನು ಅನುಸರಿಸಿ ಜೀವಿಸುವ ಅಂತ್ಯ ದಿನದ ತನಕ ಬರುವ ಸಜ್ಜನರ ಮೇಲೆ. ನಿಶ್ಚಯವಾಗಿಯೂ ಸರ್ವಲೋಕ ಸಂರಕ್ಷಕನಾದ ಅಲ್ಲಾಹನು ಮನುಷ್ಯನನ್ನು ಸೃಷ್ಠಿಸಿದ್ದು ಅವನನ್ನು ಮಾತ್ರ ಆರಾಧಿಸಬೇಕೆಂದಾಗಿದೆ. ಅವನಿಗೆ ಯಾವುದೇ ಬಾಗಿದಾರಲಿಲ್ಲವೆನ್ನುವುದು ವಾಸ್ತವವಾಗಿದೆ. ಅವನು ಈ ಸತ್ಯವನ್ನು ಸಾರ್ವತ್ರಿಕಗೊಳಿಸಲು, ಅವನ ಕಡೆಗೆ ಆಮಂತ್ರಿಸಲು, ಈ ಕುರಿತು ವಿವರಣೆ ನೀಡಲು ಮತ್ತು ಇದಕ್ಕೆ ವ್ಯತಿರಿಕ್ತವಾದುದೇನೆಲ್ಲಾ ಇದೆಯೋ ಅವುಗಳು ಮಿಥ್ಯವಾಗಿದೆ ಎನ್ನುವುದನ್ನು ಮನವರಿಕೆ ಮಾಡಿಕೊಡಲು ಪ್ರವಾದಿಗಳನ್ನು ಕಳುಹಿಸಿದನು. ಅದೇ ಉದ್ದೇಶದಿಂದ ಆಕಾಶದಿಂದ ಗ್ರಂಥಗಳನ್ನು ಇಳಿಸಿದನು ಮತ್ತು ಸರ್ವಶಕ್ತನಾದ ಅಲ್ಲಾಹನು ಭೂಮಿಯಲ್ಲಿ ಮನುಷ್ಯರ ಮತ್ತು ಯಕ್ಷ(ಜಿನ್ನ್)ಗಳ ಮಾರ್ಗದರ್ಶನಕ್ಕಾಗಿ ಮನುಷ್ಯರಿಂದಲೇ ಸಂದೇಶವಾಹಕರನ್ನು ನಿಯುಕ್ತಿಗೊಳಿಸುತ್ತಾ ಬಂದನು.

**ಇಹಲೋಕವು ಪರಲೋಕದ ಕೃಷಿ ಸ್ಥಳವಾಗಿದೆ :**

ಅಲ್ಲಾಹನು ಐಹಿಕ ಜೀವನವನ್ನು ಪಾರತ್ರಿಕ ಲೋಕಕ್ಕಾಗಿ ಕೃಷಿ ಮಾಡುವ ಅಥವಾ ಸಂಪಾದಿಸುವ ಉಪಾದಿಯಾಗಿ ಮಾಡಿದ್ದಾನೆ. ಯಾರಾದರೂ ಈ ಜೀವನದಲ್ಲಿ ಅಲ್ಲಾಹನು ನಿಶ್ಚಯಿಸಿದ ಮೇರೆಯೊಳಗೆ ಅವನ ನಿಯಮ ನಿರ್ದೇಶನವನ್ನು ಅನುಸರಿಸಿಕೊಂಡು ತೌಹೀದ್ (ಅಲ್ಲಾಹನನ್ನು ಮಾತ್ರ ಆರಾಧನಾರ್ಹನೆಂದು ತಿಳಿದು)ಶ್ರದ್ದೆಯೊಂದಿಗೆ ಮತ್ತು ಅವನ ಪ್ರವಾದಿ(ಸ)ರವರನ್ನು ಸಂಪೂರ್ಣವಾಗಿ ಅನುಸರಿಸಿ ನಡೆದರೆ ಅವರು ಈ ಪರಿಶ್ರಮದಿಂದ (ಲೋಕ) ವಿಶ್ರಮದ(ಪರಲೋಕ) ಕಡೆಗೆ ಸಾಗುವಾಗ ಆಹ್ಲಾದಕರವೂ ಪ್ರಕಾಶಮಾನವೂ ಆದ ಹರ್ಷಾನಂದದ ನಿವಾಸವನ್ನು ಪಡೆಯುವರು.

**ಸ್ವರ್ಗದ ಪ್ರತಿಫಲವು ಊಹಾತೀತವಾಗಿದೆ :**

ಎಂದೆಂದೂ ಕೊನೆಗೊಳ್ಳದ ಐಷಾರಾಮ ತುಂಬಿದ ಗ್ರಹಗಳಾಗಿವೆ ಅದು. ಆ ಮನೆಯ ನಿವಾಸಿಗಳನ್ನೆಂದಿಗೂ ಮೃತ್ಯು ಕಾಡದು. ಅವರು ತೊಟ್ಟ ವಸ್ತ್ರವು ಕಳೆಗುಂದದು. ಅವರ ಯವ್ವನವು ಎಂದೆಂದೂ ಕ್ಷೀಣಿಸದು. ಉತ್ಕೃಷ್ಟ ಸುಖ, ಸ್ಥಿರ ಯೌವ್ವನ ಮತ್ತು ಆರೋಗ್ಯ, ಪವಿತ್ರ ಮತ್ತು ಪಾವನ ಜೀವನದಿಂದ ಧನ್ಯರಾಗುವರವರು.

ಅಲ್ಲಾಹನ ಕಡೆಯಿಂದ ಅಶರೀರವಾಣಿ ಅವರಿಗೆ ಕೇಳಿಸುತ್ತಿರುವುದು.

يَـااَهْـلَ الْـجَـنَّةِ اِنَّ لَكُمْ اَنْ تَحْيَوْا فَلاَ تَمُوْتُوْا اَبَداً وَاِنَّ لَكُمْ اَنْ تَـصِحُّوْا فَلاَ تَسْقَمُوْا اَبَدًاوَاِنَّ لَكُمْ اَنْ تَشِبُّوْا فَلاَ تَهْرَمُوْا اَبَدًاوَاِنَّ لَكُمْ اَنْ تَنْعَمُوْا فَلاَ تَبْاَسُوْا اَبَدًا (صحيح مسلم ،كتاب الجنة)

**"ಹೇ ಸ್ವರ್ಗದ ನಿವಾಸಿಗಳೇ! ನಿಮಗೆ ಶಾಶ್ವತ ಜೀವನವು ಲಭಿಸಿದೆ. ನೀವೆಂದೂ ಮರಣ ಹೊಂದಲಾರಿರಿ. ನೀವು ಸದಾ ಆರೋಗ್ಯವಂತರಾಗಿದ್ದು ಯಾವುದೇ ಕೇಡು ನಿಮ್ಮ ಆರೋಗ್ಯವನ್ನು ಬಾಧಿಸದು. ಎಂದಿಗೂ ಮುಪ್ಪು ಸೋಂಕದ ಚಿರಯೌವ್ವನ ನಿಮಗಿರುವುದು. ಎಂದೆಂದಿಗೂ ಅಲ್ಲಾಹನ ಅನುಗ್ರಹಗಳು ನಿಮ್ಮನ್ನು ಆವರಿಸಿಕೊಂಡಿರುವುದು. ಅದು ಎಂದೆಂದೂ ನಿಮ್ಮಿಂದ ಸರಿದುಹೋಗದು".**(ಸಹೀಹ್ ಮುಸ್ಲಿಮ್ ಕಿತಾಬುಲ್ ಜನ್ನ)

ಇದು ಸ್ವರ್ಗದ ನಿವಾಸಿಗಳ ಭಾಗ್ಯವೆನಿಸುವುದು. ಅವರ ನಿವಾಸದಲ್ಲಿ ಅವರು ಇಚ್ಛಿಸುವ ಸುಖ-ಸಂಪತ್ತೆಲ್ಲವೂ ಅವರಿಗೆ ಲಭಿಸುವುದು.

نُزُ لاً مِّنْ غَفُوْ رٍ رَّحِيْمٍ (سورة فصلت ، الآية ٣٢)

**"ಮಹಾ ಕ್ಷಮಾ ಶೀಲನೂ, ಕರುಣಾನಿಧಿಯೂ, ಆಗಿರುವವನ ಕಡೆಯಿಂದ ನಿಮಗಿರುವ ಆತಿಥ್ಯವಿದು"**(41/32)

ಮಾತ್ರವಲ್ಲದೆ ಅವರಿಗೆ ಅವರ ನಿವಾಸದಲ್ಲಿ ಸರ್ವಾದಿಪತಿಯಾದ ಅಲ್ಲಾಹನೊಂದಿಗೆ ಭೇಟಿಯಾಗುವ ಮತ್ತು ಆ ಪವಿತ್ರ ವದನವನ್ನು ದರ್ಶಿಸುವ ಸೌಭಾಗ್ಯ ಸಂಪನ್ನವಾಗುವುದು.

### ನರಕ ಶಿಕ್ಷೆಯ ಭೀಕರತೆ

ಯಾರು ಈ ಕೃಷಿ ಕ್ಷೇತ್ರದಲ್ಲಿ ಕೆಡುಕನ್ನು ಬಿತ್ತಿಬೆಳೆಸುತ್ತಾರೊ, ಪ್ರವಾದಿಗಳ ಸಂದೇಶಕ್ಕೆ ಮತ್ತು ಬೋಧನೆಗೆ ವಿರುದ್ಧವಾಗಿ ಶೈತಾನನ ಮತ್ತು ಸ್ವೇಚ್ಛೆಯ ಪ್ರೇರಣೆಯನ್ನು ಅನುಸರಿಸುತ್ತಾರೊ ಅವರು ಈಲೋಕದ ನಿವಾಸದಿಂದ ಹೊರಟು ಸೇರುವ ನಿವಾಸವು ಅತ್ಯಂತ ಭೀಕರವಾಗಿರುವುದು. ಅದು ಅಪಮಾನ, ನಷ್ಟ, ಶಿಕ್ಷೆ ಮತ್ತು ಯಾತನೆಯ ಬೋನಾಗಿರುವುದು. ಅಲ್ಲಿ ಅವರ ಅವಸ್ಥೆಯು ಯಾತನಾಮಯವೂ-ನಿಂದ್ಯವೂ ಆಗಿರುವುದು.

لاَيُـقْـضَـىٰ عَلَيْهِمْ فَيَمُوْتُوْا وَلاَيُخَفَّفُ عَنْهُمْ مِنْ عَذَابِهَا (سورة فاطر ،الآية ٣٦)
لاَيُـقْـضَـىٰ

**"ಅವರಿಗೆ ಮರಣಕೊಟ್ಟು ಮುಗಿಸಿಬಿಡಲಾಗುವುದೂ ಇಲ್ಲ ಮತ್ತು ನರಕಯಾತನೆಯಲ್ಲಿ ಕಡಿಗೊಳಿಸಲಾಗುವುದೂ ಇಲ್ಲ"**(35-36)

إِنَّهُ مَنْ يَّأْتِ رَبَّهُ مُجْرِمًا فَإِنَّ لَهُ جَهَنَّمَ لَا يَمُوتُ فِيهَا وَلَا يَحْيٰ (سورة طه الآية ٧٤)

**"ವಾಸ್ತವದಲ್ಲಿ ಅಪರಾಧಿಯಾಗಿ ತನ್ನ ಪ್ರಭುವಿನ ಸನ್ನಿಧಿಯಲ್ಲಿ ಹಾಜರಾದವನಿಗೆ ನರಕವಿದೆ. ಅದರಲ್ಲಿ ಅವನು ಸಾಯಲಿಕ್ಕೂ ಇಲ್ಲ ಬದುಕಲಿಕ್ಕೂ ಇಲ್ಲ"**(20-74)

ಅವರ ಕುರಿತು ಅಲ್ಲಾಹನು ಹೇಳುತ್ತಾನೆ,

وَإِنْ يَّسْتَغِيثُوا يُغَاثُوا بِمَآءٍ كَالْمُهْلِ يَشْوِى الْوُجُوهَ بِئْسَ الشَّرَابُ وَسَآءَتْ مُرْتَفَقًا (سورة الكهف الآية ٢٩)

**"ಅಲ್ಲಿ ಅವರು ನೀರುಬೇಕೆಂದು ಕೇಳಿದಾಗ ಎಣ್ಣೆಯ ಮಡ್ಡಿಯಂತಹಾ ಹಾಗೂ ಬಾಯನ್ನು ಸುಟ್ಟು ಹಾಕುವಂತಹಾ ನೀರಿನಿಂದ ಅವರನ್ನು ಸತ್ಕರಿಸಲಾಗುವುದು. ಅತ್ಯಂತ ಕೆಟ್ಟ ಪೇಯವದು ಮತ್ತು ಅತಿ ಕೆಟ್ಟ ವಿಶ್ರಾಂತಿ ಗೃಹವದು"**(18-29)

ಅಲ್ಲಾಹು ಹೇಳುತ್ತಾನೆ,

وَسُقُوا مَاءً حَمِيمًا فَقَطَّعَ أَمْعَاءَهُمْ (سورة محمد،الآية ١٥)

**(ಸ್ವರ್ಗ ಯಾರ ಪಾಲಿಗೆ ಬರಲಿದೆಯೊ ಅವನು) ಕರಳುಗಳನ್ನು ಕತ್ತರಿಸಿ ಬಿಡುವಂತಹಾ ಕುದಿಯುವ ನೀರನ್ನು ಕುಡಿಸಲ್ಪಡುವ ಜನರಿಗೆ ಸಮಾನವಾಗಬಲ್ಲನೇ?"** (47-15)

**ಇಹಲೋಕವು ಕರ್ಮಭೂಮಿಯಾಗಿದೆ :** ಈ ಮೇಲಿನ ಉದ್ಧರಣೆಗಳಿಂದ ಐಹಿಕ ಜೀವನವು ಪಾರತ್ರಿಕ ಲೋಕದ ವಿಜಯಕ್ಕಾಗಿ ಪ್ರವರ್ತಿಸಲಿರುವ ಕರ್ಮಭೂಮಿಯಾಗಿದೆ ಎಂದು ಮನವರಿಕೆಯಾಗುತ್ತದೆ. ಅಲ್ಲಾಹನು ಇಷ್ಟಪಡುವ ಕರ್ಮಗಳನ್ನು ಮಾಡಿಕೊಂಡು ಅವನ ಸಂತೃಪ್ತಿಯನ್ನೂ, ಸಾಮಿಪ್ಯವನ್ನೂ ಗಳಿಸಲು ಇಲ್ಲಿ ಪ್ರಯತ್ನಿಸಬೇಕಾಗಿದೆ. ಇದು ದೇಹ ಮತ್ತು ಮನಸ್ಸಿನ ದುರಾಗ್ರಹಗಳಿಗೆದುರು ಜಿಹಾದ್ ನಡೆಸಲಿರುವ ಭೂಮಿಯಾಗಿದೆ. ನಮ್ಮ ಮಾತು ಮತ್ತು ಪ್ರವೃತ್ತಿಯ ಸುಧಾರಣೆಗಾಗಿ ಪರಿಶ್ರಮಿಸಲಿರುವ ಸ್ಥಳವಾಗಿದೆ. ಧರ್ಮದ ಕುರಿತು ಅರಿವು ಮತ್ತು ಚಿಂತನೆ ನಡೆಸಲು, ಅದರ ಕುರಿತು ಅಧ್ಯಯನ-ಅನ್ವೇಷಣೆ ನಡೆಸಲು, ಒಳಿತು ಮತ್ತು ತಖ್ವಾದ ಕಾರ್ಯಗಳಲ್ಲಿ ಸಹಕರಿಸಲು, ಸತ್ಯವನ್ನು ಪ್ರಚರಿಸಲು ಮತ್ತು ಅದರಲ್ಲಿ ಸ್ಥಿರವಾಗಿ ನಿಲ್ಲಲು, ಜ್ಞಾನ ಸಂಪಾದಿಸಲು ಮತ್ತು ಆ ಪ್ರಕಾರ ಪ್ರವರ್ತಿಸಲು ಮತ್ತು ಅಲ್ಲಾಹನ ಆರಾಧನೆ ಮಾಡಲು ಅವನಿಗಾಗಿ ತ್ಯಾಗ ಮಾಡಲು ಸಿದ್ಧಗೊಳಿಸಲಾದ ಕರ್ಮಭೂಮಿಯಾಗಿದೆ.

ಅಲ್ಲಾಹನು ಹೇಳುತ್ತಾನೆ.

وَمَا خَلَقْتُ الْجِنَّ وَالْإِنْسَ إِلَّا لِيَعْبُدُوْن مَآ أُرِيْدُ مِنْهُمْ مِّنْ رِّزْقٍ وَّمَا أُرِيْدُ اَنْ يُّطْعِمُوْنِ اِنَّ اللّٰـهَ هُوَ الرَّزَّاقُ ذُوالْقُوَّةِ الْمَتِيْنُ (سورة الذاريات الآيتان ٥٦-٥٨)

**"ನಾನು ಯಕ್ಷಗಳನ್ನೂ ಮನುಷ್ಯರನ್ನೂ ಆರಾಧನೆಗಾಗಿಯೇ ಹೊರತು ಬೇರಾವುದೋ ಕಾರ್ಯಕ್ಕಾಗಿ ಸೃಷ್ಠಿಸಿಲ್ಲ. ನಾನು ಅವರಿಂದ ಜೀವನಾಧಾರವನ್ನೇನೂ ಬಯಸುವುದಿಲ್ಲ ಮತ್ತು ಅವರು ನನಗೆ ಉಣಿಸಬೇಕೆಂದೂ ಅಪೇಕ್ಷಿಸುವುದಿಲ್ಲ"**(51:56, 57)

ಅಲ್ಲಾಹನು ಯಕ್ಷ (ಜಿನ್ನ್) ಮತ್ತು ಮನುಷ್ಯ (ಇನ್ಸ್)ರ ಒಂದು ದೊಡ್ಡ ಸಮೂಹವನ್ನೇ ಸೃಷ್ಠಿಸಿರುವುದು ಅವನನ್ನು ಮಾತ್ರ ಆರಾಧಿಸಬೇಕೆಂಬ ಉದ್ದೇಶದಿಂದಾಗಿದೆ. ಬದಲಾಗಿ ಅವರಿಂದ ಯಾವುದೇ ರೀತಿಯ ಸಹಾಯದ ಅವಶ್ಯಕತೆಗಳಿಗಾಗಿ ಖಂಡಿತ ಅಲ್ಲ.

ಅಲ್ಲಾಹನು ಅವನ ಹೊರತು ಸರ್ವವಸ್ತುಗಳಿಂದ ನಿರಪೇಕ್ಷನಾಗಿರುವನು.
ಅವನೇ ಹೇಳುತ್ತಾನೆ.

يَا يُّهَا النَّاسُ اَنْتُمُ الْفُقَرَاءُ اِلَى اللّٰهِ وَاللّٰهُ هُوَ الْغَنِيُّ الْحَمِيْدُ ،اِنْ يَّشَأْ يُذْهِبْكُمْ وَيَأْتِ بِخَلْقٍ جَدِيْدٍ وَمَاذٰلِكَ عَلَى اللّٰهِ بِعَزِيْزٍ(سورة فاطر،الآية ١٥-١٧)

**"ಜನರೇ, ನೀವೇ ಅಲ್ಲಾಹನ ಅವಲಂಬಿತರಾಗಿದ್ದೀರಿ ಮತ್ತು ಅಲ್ಲಾಹ್ ನಿರಪೇಕ್ಷನೂ, ಸ್ವಯಂಸ್ತುತ್ಯನೂ ಆಗಿರುತ್ತಾನೆ. ಅವನಿಚ್ಛಿಸಿದರೆ ನಿಮ್ಮನ್ನು ಸರಿಸಿ ಯಾವುದಾದರೊಂದು ಹೊಸ ಸೃಷ್ಠಿಯನ್ನು ನಿಮ್ಮ ಸ್ಥಾನಕ್ಕೆ ತರಬಲ್ಲನು. ಹೀಗೆ ಮಾಡುವುದು ಅಲ್ಲಾಹನಿಗೆ ಏನೂ ಕಷ್ಟ ಸಾಧ್ಯವಲ್ಲ."** (35: 15, 16, 17)

ಅಲ್ಲಾಹನು ಮನುಷ್ಯರು ಮತ್ತು ಜಿನ್ನ್‌ಗಳನ್ನು ಅವನ ಬಳಿ ಇದ್ದ ಒಂದು ಕೊರತೆಯನ್ನು ನೀಗಿಸಲು ಸೃಷ್ಠಿ ಮಾಡಿದ್ದೂ ಅಲ್ಲ ಅಥವಾ ಅವನ ಯಾವುದೋ ದೌರ್ಬಲ್ಯವನ್ನು ತುಂಬಲು ಆ ಮೂಲಕ ನಾನು ಪರಿಪೂರ್ಣನೆಂದು ಸಾಬೀತು ಪಡಿಸಲು ಸೃಷ್ಠಿಸಿದ್ದೂ ಅಲ್ಲ.

**ಮನುಷ್ಯರನ್ನೂ ಜಿನ್ನ್‌ಗಳನ್ನು ಅಲ್ಲಾಹನು ಮಹಾನ್ ಉದ್ದೇಶದಿಂದ ಸೃಷ್ಠಿಸಿರುತ್ತಾನೆ :**

ಅಲ್ಲಾಹನು ಒಂದು ದೊಡ್ಡ ಉದ್ದೇಶದಿಂದ ಮನುಷ್ಯರು ಮತ್ತು ಜಿನ್ನ್‌ಗಳ ಸೃಷ್ಠಿಗೆ ಚಾಲನೆ ನೀಡಿದನು. ಅವನನ್ನು ಮಾತ್ರ ಆರಾಧಿಸಬೇಕೆಂಬುದೇ ಆ ಉದ್ದೇಶವಾಗಿತ್ತು. ಅವನಿಗೆ ಸಂಪೂರ್ಣ ಶರಣಾಗಿ ಅವನ ಮಹಾನತೆಯನ್ನು ಕೊಂಡಾಡುತ್ತಾ ಜೀವಿಸಬೇಕು. ಅವನ ನಾಮ ವಿಶೇಷಣಗಳನ್ನು ಅರಿತು ಭಯ-ಭಕ್ತಿಯಿಂದ ಅವನ ಮೇಲೆ ವಿಶ್ವಾಸವಿಟ್ಟು ಅವನ ಕೃಪಾಕಟಾಕ್ಷವನ್ನು ನೆಚ್ಚಿ ಬದುಕಬೇಕು. ಅವನು ಇಷ್ಟಪಡುವ ಕಾರ್ಯಗಳನ್ನು ಮಾಡುತ್ತಾ ಅವನು ಇಷ್ಟಪಡುವ ರೀತಿ-

ರಿವಾಜುಗಳನ್ನು ಅಳವಡಿಸಿಕೊಂಡು ಸದಾ ಅವನ ಧ್ಯಾನದಲ್ಲಿ ಬದುಕು ಸವಿಯಬೇಕು. ಅವನ ಅನುಗ್ರಹಗಳಿಗೆ ಕೃತಜ್ಞತೆ ಸಲ್ಲಿಸುತ್ತಾ ಅವನ ಪರೀಕ್ಷಿಸುವಾಗಲೆಲ್ಲಾ ಸಹನೆಯನ್ನು ಕೈಗೊಂಡು ಅವನ ಮಾರ್ಗದಲ್ಲಿ ನಿಷ್ಠೆಯಿಂದ ಪರಿಶ್ರಮಿಸಬೇಕು. ಅವನ ಸಾಮಿಪ್ಯ ಮತ್ತು ಸಂತೃಪ್ತಿಗಾಗಿ ಹಪತಪಿಸುತ್ತಾ ಜೀವಿಸಬೇಕಾಗಿದೆ. ಆ ಕುರಿತು ಅಲ್ಲಾಹನು ಹೇಳುವುದು ನೋಡಿ.

اَللّٰهُ الَّذِىْ خَلَقَ سَبْعَ سَمٰوٰتٍ وَمِنَ الْاَرْضِ مِثْلَهُنَّ يَتَنَزَّلُ الْاَمْرُ بَيْنَهُنَّ لِتَعْلَمُوْا أَنَّ اللّٰهَ عَلٰى كُلِّ شَىْءٍ قَدِيْرٌ وَّ اَنَّ اللّٰهَ قَدْ اَحَاطَ بِكُلِّ شَىْءٍ عِلْمًا (الطلاق،الآية ١٢)

"ಸಪ್ತಗಗನಗಳನ್ನು ಮತ್ತು ಅವುಗಳಂತೆಯೇ ಭೂಮಿಯ ವಿಧದಿಂದಲೂ ಸೃಷ್ಟಿಸಿದವನು ಅಲ್ಲಾಹನೇ ಆಗಿದ್ದಾನೆ. ಅವುಗಳ ನಡುವೆ ಆದೇಶಗಳು ಇಳಿಯುತ್ತಲೇ ಇರುತ್ತದೆ. ಅಲ್ಲಾಹನು ಎಲ್ಲದಕ್ಕೂ ಸಾಮರ್ಥ್ಯವುಳ್ಳವನು ಮತ್ತು ಅಲ್ಲಾಹನ ಜ್ಞಾನವು ಎಲ್ಲ ವಿಷಯಗಳಿಗೂ ವ್ಯಾಪಿಸಿಕೊಂಡಿದೆ ಎಂಬುದನ್ನು ನೀವು ತಿಳಿದುಕೊಳ್ಳುವಂತಾಗಲೂ (ನಿಮಗಿದನ್ನು ತಿಳಿಸಲಾಗುತ್ತಿದೆ)"(65-12)

ಮತ್ತೊಂದು ಕಡೆ ಅಲ್ಲಾಹನ ಪರಿಶುದ್ಧವಾಣಿ ಹೀಗಿದೆ.

وَلِلّٰهِ الْاَسْمَآءُ الْحُسْنٰى فَادْعُوْهُ بِهَا (سورة الاعراف ١٨٠)

"ಅಲ್ಲಾಹನು ಅತ್ಯುತ್ತಮ ನಾಮಗಳಿಗೆ ಅರ್ಹನಾಗಿದ್ದಾನೆ. ಅವನನ್ನು ಉತ್ತಮನಾಮಗಳಿಂದಲೇ ಕರೆಯಿರಿ."(7-180)

ಮತ್ತೊಂದು ಕಡೆ ಅಲ್ಲಾಹನು ಈ ರೀತಿ ಹೇಳುತ್ತಾನೆ.

اِنَّ فِىْ خَلْقِ السَّمٰوٰتِ وَالْاَرْضِ وَاخْتِلَافِ اللَّيْلِ وَالنَّهَارِ لَاٰيٰتٍ لِّاُولِى الْاَلْبَابِ. اَلَّذِيْنَ يَذْكُرُوْنَ اللّٰهَ قِيَامًا وَّقُعُوْدًا وَّعَلٰى جُنُوْبِهِمْ وَيَتَفَكَّرُوْنَ فِىْ خَلْقِ السَّمٰوٰتِ وَالْاَرْضِ رَبَّنَا مَا خَلَقْتَ هٰذَا بَاطِلًا سُبْحَانَكَ فَقِنَا عَذَابَ النَّارِ (سورة ال عمران الآيتان ١٩٠،١٩١)

"ಭೂಮಿ ಆಕಾಶಗಳ ಸೃಷ್ಟಿಯಲ್ಲಿಯೂ ರಾತ್ರಿ ಹಗಲುಗಳು ಅನುಕ್ರಮವಾಗಿ ಬರುತ್ತಿರುವುದರಲ್ಲಿಯೂ ಬುದ್ಧಿಜೀವಿಗಳಿಗೆ ಸಾಕಷ್ಟು ನಿದರ್ಶನಗಳಿವೆ. ಅವರು ಉದ್ದಾಗಲೂ-ಕುಳಿತಾಗಲೂ-ಮಲಗಿದಾಗಲೂ ಎಲ್ಲ-ಸ್ಥಿತಿಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ಭೂಮಿ ಆಕಾಶಗಳ ನಿರ್ಮಾಣದ ಬಗ್ಗೆ ಪರ್ಯಾಲೋಚಿಸುತ್ತಾರೆ (ಅವರು ಪರವಶರಾಗಿ ಹೇಳುತ್ತಾರೆ)" ಸಂರಕ್ಷಕನೆ, ನೀನು ಇವುಗಳನ್ನೆಲ್ಲ ವ್ಯರ್ಥ ಹಾಗೂ ಉದ್ದೇಶರಹಿತವಾಗಿ ಸೃಷ್ಟಿಸಲಿಲ್ಲ. ನೀನು

**(ನಿರರ್ಥಕ ಕಾರ್ಯಗಳನ್ನೆಸಗುವುದರಿಂದ) ಪರಿಶುದ್ಧನು. ಆದರಿಂದ ಓ ನಮ್ಮ ಪ್ರಭೂ, ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು''**(3-190, 191)

### ಲೋಕವು ನಶ್ವರವಾಗಿದೆ :

ಹೇ ಅಲ್ಲಾಹನ ದಾಸನೇ! ನಿನ್ನನ್ನು ಈ ಭೂಮಿಯಲ್ಲಿ ಸೃಷ್ಟಿಸಲಾಗಿದೆ ಎಂಬ ಮಾತ್ರಕ್ಕೆ ನೀನಿಲ್ಲಿ ಶಾಶ್ವತವಾಗಿ ಬಾಳಲಾರೆ. ನೀನಿಲ್ಲಿ ನೆಲೆಸುವಷ್ಟು ಕಾಲ ಸತ್ಕರ್ಮಗಳಿಂದ ನಿನ್ನ ಬತ್ತಲಿಕೆಯನ್ನು ತುಂಬಿ ಮುಂದಿನ ನೆಲೆಯತ್ತ ಸಾಗಬೇಕಾಗಿದೆ. ಕೆಲವೊಮ್ಮೆ ಯಾವುದೇ ಕರ್ಮ ಸಾಧಿಸದೇ ಹೋಗುವುದೂ ಇದೆ. ಬಾಲ್ಯ ಮತ್ತು ಬುದ್ಧಿ ಬರುವ ಮೊದಲೇ ತೆರಳುವವರೂ ಇದ್ದಾರೆ. ಅಂತಹಾ ಸಂದರ್ಭದಲ್ಲಿ ಅವರಿಗೆಲ್ಲ ಯಾವುದೇ ಪೂರ್ವತಯಾರಿ ಇರಲಾರದು. ಅದು ಅವಶ್ಯವೂ ಎನಿಸದು.

### ಜೀವನವು ಒಳಿತು-ಕೆಡುಕುಗಳ ಸಂಗಮವಾಗಿದೆ :

ಜೀವನವು ಒಳಿತು ಮತ್ತು ಕೆಡುಕುಗಳು ಸಮ್ಮಿಶ್ರವಾಗಿರುವ ಒಂದು ವಾಸ ಸ್ಥಳವಾಗಿದೆ. ಸುಖ-ದುಃಖಗಳೂ ಇಲ್ಲಿ ಸಮ್ಮಿಳಿತವಾಗಿದೆ. ಲಾಭ-ನಷ್ಟಗಳೂ ಒತ್ತೊಟ್ಟಿಗಿದೆ. ಒಳ್ಳೆಯತನ ಮತ್ತು ಕೆಟ್ಟ ತನವೂ ಸಮಾಗಮಿಸಿದೆ. ಪವಿತ್ರವೂ ಅಪವಿತ್ರವೂ, ಶುದ್ಧವೂ-ಅಶುದ್ಧವಾದ ವಸ್ತುಗಳೂ ಮೇಲೈಸಿದೆ. ಆರೋಗ್ಯ ಮತ್ತು ರೋಗಗಳು - ಬಡತನ ಮತ್ತು ಶ್ರೀಮಂತಿಕೆ ಕೂಡಿ ಕಲೆತುಹೋಗಿದೆ. ಸತ್ಯ ವಿಶ್ವಾಸ ಮತ್ತು ಸತ್ಯ ನಿಷೇದವು ನೆಲೆನಿಂತಿದೆ. ಅಪರಾಧಿಗಳು ಮತ್ತು ನಿರಪರಾಧಿಗಳೂ, ನಾಗರಿಕತೆ ಮತ್ತು ಅನಾಗರಿಕತೆಯ ಪ್ರವೃತ್ತಿಗಳು ಕೂಡಾ ಸಂಗಮಿಸಿದೆ.

### ಜೀವನದ ಉದ್ದೇಶ ಮನದಲ್ಲಿರಲಿ

ಅಲ್ಲಾಹನು ಮನುಷ್ಯರ ಅವಶ್ಯಕತೆಗಳಿಗಾಗಿ ಎಷ್ಟೊಂದು ವಸ್ತುಗಳನ್ನು ಸೃಷ್ಟಿಸಿರುವನೆಂಬುದನ್ನು ಅರಿಯಲು ಒಮ್ಮೆ ನಮ್ಮ ಸುತ್ತಲೂ ಕಣ್ತೆರೆದು ನೋಡಿದರೆ ಸಾಕು. ಅವನ ಔದಾರ್ಯತೆಗಾಗಿ ಮನುಷ್ಯನು ಎಷ್ಟು ಕೃತಜ್ಞತೆ ಸಲ್ಲಿಸಿದರೂ ಸಾಲದು. ಅವನು ಸೃಷ್ಟಿಸಿದ-ಸಂರಕ್ಷಿಸುತ್ತಿರುವ ಈ ನೆಲದಲ್ಲಿ ಅವನ ಮಹಾನತೆಯನ್ನು ಕೊಂಡಾಡುತ್ತಾ, ಅವನನ್ನು ಅನುಸರಿಸಿಕೊಂಡು ಅವನ ಆದೇಶಗಳನ್ನು ಪಾಲಿಸುತ್ತಾ, ಅವನು ನಿಷೇಧಿಸಿದ ಸಂಗತಿಗಳನ್ನು ವರ್ಜಿಸುತ್ತಾ ಅವನಿಗೆ ಸ್ತುತಿ-ಸ್ತೊತ್ರಗಳನ್ನು ಸಲ್ಲಿಸುತ್ತಾ ಇರುವುದು ಅವನಿಗೆ ಸಲ್ಲತಕ್ಕ ಕೃತಜ್ಞತೆಯಾಗಿದೆ. ನಮ್ಮ ಅವಶ್ಯಕತೆಗಳಿಗಾಗಿ ಮತ್ತು ದುಃಖ ದುಮ್ಮಾನಗಳ ಸಂದರ್ಭಗಳಲ್ಲಿ ಅವನನ್ನೇ ನೆಚ್ಚಿಕೊಂಡು ಕರೆದು ಪ್ರಾರ್ಥಿಸುತ್ತಿರಬೇಕಾಗಿದೆ. ಅವನೊಂದಿಗೇ ನಮ್ಮೆಲ್ಲಾ ಅಪೇಕ್ಷೆಗಳನ್ನೂ-ಸಮಸ್ಯೆಗಳನ್ನೂ ತೋಡಿಕೊಳ್ಳಬೇಕಾಗಿದೆ. ಅವನಿಂದಲೇ ಸರ್ವ ಸಮಸ್ಯೆಗಳಿಗೂ ಪರಿಹಾರವನ್ನು ಯಾಚಿಸಬೇಕಾಗಿದೆ. ಸರ್ವಕಾರ್ಯದಲ್ಲೂ ಅಂದರೆ ಐಹಿಕ ಮತ್ತು ಪಾರತ್ರಿಕ ಲೋಕದ ಎಲ್ಲಾ ವಿಷಯಗಳಿಗೂ ಅವನ ಸಹಾಯವನ್ನೇ ಅಪೇಕ್ಷಿಸಬೇಕಾಗಿದೆ.

ಹೇ ಅಲ್ಲಾಹನ ದಾಸನೇ! ನಿನ್ನನ್ನು ಸೃಷ್ಟಿಸುವ ಮತ್ತು ನಿನ್ನನ್ನು ಈ ಲೋಕದಲ್ಲಿ ನೆಲೆ ನಿಲ್ಲಿಸುವ ಉದ್ದೇಶವೇ ಅಲ್ಲಾಹನ ಆರಾಧನೆ ಇಲ್ಲಿ ಸ್ಥಿರವಾಗಿರಬೇಕು, ಅವನ ಆದೇಶಗಳು ಇಲ್ಲಿ ಜಾರಿಗೆ ಬರಬೇಕು, ಅವನು ಇಷ್ಟ ಪಡದ ಅವನು ನಿಷಿದ್ಧಗೊಳಿಸುವ ಕಾರ್ಯಗಳು ಇಲ್ಲಿ ಕಂಡು

ಬರಬಾರದು. ಜನರು ತಮ್ಮೆಲ್ಲಾ ಅವಶ್ಯಕತೆಗಳಲ್ಲೂ ಅವನನ್ನೇ ಅವಲಂಬಿಸಬೇಕು. ಅವರು ತಮ್ಮ ಜೀವನ ಮತ್ತು ಮರಣಾನಂತರ ಎಲ್ಲಾ ವಿಷಯಗಳ ಕುರಿತೂ ಅಲ್ಲಾಹನ ಸಹಾಯವನ್ನೇ ಅಪೇಕ್ಷಿಸಬೇಕು. ಅವನ ಸಂದೇಶವಾಹಕರು ತಂದ ಧರ್ಮವನ್ನು ಅನುಸರಿಸಿ ನಡೆಯಬೇಕು. ಈ ಅನುಸರಣೆ, ಅವಲಂಬನೆಗಳು ಆತ್ಮಾರ್ಥವಾಗಿರಬೇಕು ಅವನ ಆದೇಶಗಳ ಕುರಿತು ಪ್ರೀತಿ ಇರಬೇಕು. ಅವನು ತಡೆದ ಸಂಗತಿಗಳನ್ನು ಸ್ವಯಂ ಸ್ಫೂರ್ತಿಯಿಂದ ತೊರೆಯಬೇಕು. ಮಾತ್ರವಲ್ಲದೆ ಆ ಕುರಿತು ಜಿಗುಪ್ಸೆ ಹೊಂದಿರಬೇಕು. ಪ್ರಭುವಿನ ಕುರುಣೆಯ ಕುರಿತು ಸದಾ ನಿರೀಕ್ಷೆ ಹೊಂದಿರಬೇಕು ಮತ್ತು ಅವನ ಶಿಕ್ಷೆ ಮತ್ತು ಯಾತನೆಯ ಕುರಿತು ಭಯಪಡಬೇಕು ಎಂದಾಗಿದೆ.

**ಪ್ರವಾದಿಗಳ ನಿಯುಕ್ತಿಯ ಉದ್ದೇಶ :**

ಜನರಿಗೆ ಸತ್ಯಸಂದೇಶವನ್ನು, ಆರಾಧನೆಯ ವಿಧಾನಗಳನ್ನು, ಜೀವನದ ಶಿಷ್ಟಾಚಾರಗಳನ್ನೂ ತಿಳಿಸಿಕೊಡಲು ಅಲ್ಲಾಹನು ಅವರಿಂದಲೇ ಪ್ರವಾದಿಗಳನ್ನು ಆರಿಸಿ ನಿಯುಕ್ತಿಗೊಳಿಸಿದನು. ಅವರು ಜನರು ಅತ್ಯಾವಶ್ಯಕವಾಗಿ ಅರಿತಿರಬೇಕಾದ ಸಂಗತಿಗಳನ್ನು ಕಲಿಸಿದರು. ಅವರ ಇಹ-ಪರದಲ್ಲಿ ನಷ್ಟಕ್ಕೆ ಒಳಪಡಿಸಬಹುದಾದ ನಿಷಿದ್ಧಕಾರ್ಯಗಳಿಂದ ಜನರನ್ನು ತಡೆದರು. ಆದ್ದರಿಂದ ಮುಂದೆ ಯಾರೂ ನಿಮ್ಮ ಬಳಗೆ ಸತ್ಕರ್ಮ ಕೈಗೊಳ್ಳುವಂತೆ ಹೇಳಲು ಮತ್ತು ಆ ಕುರಿತು ಸತ್ಫಲದ ಸುವಾರ್ತೆ ನೀಡಲು, ಅದೇ ರೀತಿ ದುಷ್ಪ್ರವರ್ತಿಗಳಿಂದ ತಡೆಯಲು ಮತ್ತು ಆ ಕುರಿತು ಭಯ ಹುಟ್ಟಿಸಲು ಯಾರೂ ಬಂದೇ ಇಲ್ಲವೆಂದು ಹೇಳುವಂತಿಲ್ಲ. ವಾಸ್ತವ ಸಂಗತಿ ಏನೆಂದರೆ ಸುವಾರ್ತೆ ನೀಡುವ ಮತ್ತು ಎಚ್ಚರಿಕೆ ನೀಡುವ ಪ್ರವಾದಿಗಳು ಬಂದಿರದ ಯಾವ ಜನಾಂಗವೂ ಲೋಕದಲ್ಲಿ ಗತಿಸಿ ಹೋಗಿಲ್ಲ.

ಅಲ್ಲಾಹನು ಹೇಳುತ್ತಾನೆ.

**وَلَقَدْبَعَثْنَا فِى كُلِّ أُمَّةٍ رَّسُولاً أَنِ اعْبُدُوااللَّهَ وَاجْتَنِبُو الطَّاغُوتَ**(سورة النحل،الآية ٣٦)

**"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕನನ್ನು ಕಳುಹಿಸಿದೆವು ಮತ್ತು ಅಲ್ಲಾಹನ ಆರಾಧನೆ ಮಾಡಿರಿ ತಾಗೂತ್‌ನ ಆರಾಧನೆಯಿಂದ ದೂರವಿರಿ ಎಂದು ಅವರ ಮೂಲಕ ಎಚ್ಚರಿಕೆ ನೀಡಿದೆವು"**

ಅಲ್ಲಾಹನು ಪುನಾರಾವರ್ತಿಸುತ್ತಾನೆ,

**رُسُلاً مُّبَشِّرِينَ وَمُنْذِرِينَ لِئَلَّا يَكُونَ لِلنَّاسِ عَلَى اللَّهِ حُجَّةٌبَعْدَ الرُّسُلِ**(سورة النساء،الآية ١٦٥)

**"ಅವನು ಸಂದೇಶವಾಹಕರೆಲ್ಲರನ್ನು ನಿಯೋಗಿಸಿದ ಬಳಿಕ ಜನರ ಬಳಿ ಅಲ್ಲಾಹನಿಗೆದುರು ವಾದ ಉಳಿಯದಂತಾಗಲೂ ಅವರನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರನ್ನಾಗಿ ಮಾಡಿ ಕಳುಹಿಸಿದ್ದನು"**

ಅಲ್ಲಾಹನು ಮತ್ತೊಂದೆಡೆ ಹೀಗೆ ಹೇಳುತ್ತಾನೆ,

وَمَا اَرْسَلْنَا مِنْ قَبْلِكَ مِنْ رَّسُوْلٍ اِلَّا نُوْحِىْ اِلَيْهِ اَنَّهُ لَا اِلٰهَ اِلَّا اَنَا فَاعْبُدُوْنِ (سورة الانبياء، الآية ٢٥)

**"ನಾವು ನಿಮಗಿಂತ ಮೊದಲು ಕಳುಹಿಸಿದ ಪ್ರತಿಯೊಬ್ಬ ಸಂದೇಶವಾಹಕರಿಗೂ ನನ್ನ ಹೊರತು ಅನ್ಯ ದೇವರಿಲ್ಲ. ಆದ್ದರಿಂದ ನೀವು ನನ್ನನ್ನು ಮಾತ್ರ ಆರಾಧಿಸಿ ಎಂದು ವಹ್ಯ್ ಮಾಡಿದ್ದೆವು"**

ಅಲ್ಲಾಹನು ಇಳಿಸಿಕೊಟ್ಟ ಸಂದೇಶಗಳನ್ನು ಜನರಿಗೆ ಮತ್ತು ಜಿನ್ನ್‌ಗಳಿಗೆ ತಲುಪಿಸಲೆಂದೇ ಪ್ರವಾದಿಗಳನ್ನು ನಿಯುಕ್ತಿ ಮಾಡುತ್ತಾನೆನ್ನುವುದು ವಾಸ್ತವ ಸಂಗತಿಯಾಗಿದೆ. ಅವರು ಮಾನವ ಮತ್ತು ಜಿನ್ನ್ ಜನಾಂಗಕ್ಕೆ ಮೋಕ್ಷದ ಹಾದಿಯನ್ನು ತೋರಿಸಿ ಕೊಟ್ಟು ಕಷ್ಟ ಮತ್ತು ನಷ್ಟದ ಸಂಗತಿಗಳಿಂದ ತಡೆದು ಹೆದರಿಸುತ್ತಾರೆ. ಈ ಕುರಿತು ವಿಶ್ವಾಸವಿಟ್ಟು ಅನುಸರಿಸಿ ನಡೆಯಬೇಕು. ಈವಿಷಯಗಳ ಕುರಿತು ಅಗೌರವ ಅಥವಾ ಅನಾಧರದ ಯಾವ ವರ್ತನೆಯೂ ನಮ್ಮಿಂದ ಪ್ರಕಟವಾಗಬಾರದು.

## ಧರ್ಮದ ವಿಧಿಯಂತೆ ಲೌಕಿಕ ಜಂಜಾಟಕ್ಕೆ ಪ್ರತಿ ತಾಳ್ಮೆ ವಹಿಸಬೇಕು :

ಅಲ್ಲಾಹನು ಅವನನ್ನು ಪ್ರಶಂಶಿಸುವುದನ್ನು ಮೆಚ್ಚುತ್ತಾನೆ. ಆದ್ದರಿಂದಲೇ ಅವನು ತನ್ನ ನಾಮ ವಿಶೇಷಣಗಳನ್ನು ಬಹಿರಂಗ ಪಡಿಸುತ್ತಾನೆ. ವಾಸ್ತವದಲ್ಲಿ ಅಲ್ಲಾಹು ಸರ್ವ ಪ್ರಶಂಶೆಗಳಿಗೆ ಅರ್ಹನಾದವನಾಗಿದ್ದಾನೆ. ಅಲ್ಲಾಹನಿಗೆ ಅವನು ನಿಷಿದ್ಧಗೊಳಿಸಿದ ಕಾರ್ಯಗಳ ಕುರಿತು ಅಸಹ್ಯವೂ-ಅಸಹನೀಯ ಭಾವವೂ ಇದೆ. ಆದ್ದರಿಂದಲೇ ಅವನು ಆ ಕಾರ್ಯಗಳನ್ನು ನಿಷೇಧಿಸಿ ಆದೇಶಗಳನ್ನು ಹೊರಡಿಸಿದ್ದಾನೆ. ಅದು ಗುಪ್ತವಾಗಿರಲಿ ಅಥವಾ ಬಹಿರಂಗವಾಗಿರಲಿ. ನಮ್ಮ ಕರ್ತವ್ಯವೇನೆಂದರೆ ನಾವು ಸದಾ ಸ್ತುತ್ಯರ್ಹನಾದ ಅಲ್ಲಾಹನ ಗುಣ ನಾಮ ವಿಶೇಷಣಗಳನ್ನು ಸ್ಮರಿಸುತ್ತಾ ಅವನನ್ನು ಸ್ತುತಿಸುತ್ತಾ ಇರಬೇಕಾಗಿದೆ. ನಮ್ಮ ಪ್ರಾರ್ಥನೆಗಳ ಪ್ರಾರಂಭದಲ್ಲೂ ಅಂತ್ಯದಲ್ಲೂ ಅಲ್ಲಾಹನನ್ನು ಸ್ತುತಿಸುವುದು ಪ್ರಾರ್ಥನೆಯು ಸ್ವೀಕರಿಸಲ್ಪಡಲು ಅವಶ್ಯಕವಾದ ಒಂದು ನಿಯಮವಾಗಿದೆ. ಅವನು ನೀಡಿದ ಅನುಗ್ರಹಗಳಿಗಾಗಿ ಸದಾ ಅವನಿಗೆ ಕೃತಜ್ಞತೆ ಸಲ್ಲಿಸಬೇಕಾಗಿದೆ. ಅವನಿಂದ ಬರುವ ಯಾವುದೇ ರೀತಿಯ ಆಪತ್ತು ಅಥವಾ ತೊಂದರೆಗಳನ್ನು ಸಹನೆಯೊಂದಿಗೆ ಅವನ ನಿಯಮಕ್ಕೆ ಬದ್ಧನಾಗಿ ಸ್ವೀಕರಿಸಿಕೊಳ್ಳಬೇಕಾಗಿದೆ. ಇದು ನಮ್ಮ ಮಟ್ಟಿಗೆ ಕಡ್ಡಾಯವಾದ ಕ್ರಮವೇ ಆಗಿದೆ. ಅವನು ನಿಷಿದ್ಧಗೊಳಿಸಿದ ಕಾರ್ಯಗಳ ಕುರಿತು ಸದಾ ಎಚ್ಚರಿಕೆ ವಹಿಸಬೇಕು. ಅಲ್ಲಾಹನ ಅನುಸರಣೆ ಮತ್ತು ಅವನ ಕಡೆಯಿಂದ ನೀಡಿದ ಬೋಧನೆ ಮತ್ತು ತರಬೇತಿಯನ್ನು ಮನಗಂಡು ಅವನು ನಿಶ್ಚಯಿಸಿದ ಸೀಮೆಯಲ್ಲೇ ಸ್ಥಿರವಾಗಿ ನಿಂತುಬಿಡಬೇಕು.

## ಅರಿವು ಮತ್ತು ನಿರೀಕ್ಷೆಯೊಂದಿಗೆ ಅಲ್ಲಾಹನ ದಾರಿಯಲ್ಲಿ ಪ್ರವರ್ತಿಸು :

ಧಾರ್ಮಿಕ ಕಾರ್ಯಗಳ ಕುರಿತು ಅರಿವು ಸಂಗ್ರಹಿಸುವುದು ನಿನ್ನ ಮಟ್ಟಿಗೆ ಕಡ್ಡಾಯಗೊಳಿಸಲಾದ ಸಂಗತಿಯಾಗಿದೆ. ನಿನ್ನನ್ನು ಯಾವ ಉದ್ದೇಶಕ್ಕಾಗಿ ಸೃಷ್ಟಿಸಲಾಗಿದೆ ಎನ್ನುವುದನ್ನು ನೀನು

ಅರಿತುಕೊಂಡು ಸಹನೆಯೊಂದಿಗೆ ಆ ದಾರಿಯಲ್ಲಿ ಕಾರ್ಯಪ್ರವೃತ್ತನಾಗಬೇಕು. ಅರಿವಿನೊಂದಿಗೆ ನಿರೀಕ್ಷೆ ಇಟ್ಟುಕೊಂಡು ನೀನು ನಿನ್ನ ಧಾರ್ಮಿಕ ಹೊಣೆಗಾರಿಕೆಯನ್ನು ನಿರ್ವಹಿಸಬೇಕು. ಅಲ್ಲಾಹನ ಪ್ರವಾದಿ(ಸ)ರವರು ಹೀಗೆ ಹೇಳುತ್ತಾರೆ.

مَنْ يُّرِدِ اللّٰهُ بِهٖ خَيْرًا يُّفَقِّهْهُ فِى الدِّيْنِ

**“ಅಲ್ಲಾಹು ಯಾರಿಗೆ ಒಲಿತು ಬಯಸುತ್ತಾನೊ ಅವನಿಗೆ ಧಾರ್ಮಿಕ ಜ್ಞಾನವನ್ನು ಒದಗಿಸುತ್ತಾನೆ"**

ಮತ್ತೊಮ್ಮೆ ಪ್ರವಾದಿ(ಸ) ಹೀಗೆಂದರು.

مَنْ سَلَكَ طَرِيْقاً يَلْتَمِسُ فِيْهِ عِلْماً سَهَّلَ اللّٰهُ لَهٗ بِهٖ طَرِيْقاً اِلَى الْجَنَّةِ

**“ಯಾರು ಜ್ಞಾನವನ್ನು ಅರಸಿಕೊಂಡು ಮನೆಯಿಂದ ಹೊರಡುತ್ತಾರೊ, ಅಲ್ಲಾಹು ಆ ಕಾರಣಕ್ಕಾಗಿ ಆ ವ್ಯಕ್ತಿಗೆ ಸ್ವರ್ಗದ ಹಾದಿಯನ್ನು ಸರಳಗೊಳಿಸುತ್ತಾನೆ."**

ಈ ಎರಡು ಹದೀಸ್‌ಗಳನ್ನೂ ಇಮಾಮ್ ಮುಸ್ಲಿಮ್ ತನ್ನ ಸಹೀಹ್‌ನಲ್ಲಿ ಉಲ್ಲೇಖಿಸಿರುತ್ತಾರೆ.

### ತೌಹೀದ್ ಇಲ್ಲದೆ ದೀನ್ ಇಲ್ಲ :

ಅಲ್ಲಾಹನು ನೀಡಿದ ಆದೇಶಗಳಲ್ಲೇ ಪ್ರಮುಖವೂ ಪ್ರಧಾನವೂ ಆಗಿರುವುದು `ಆರಾಧನೆ ಅಲ್ಲಾಹನಿಗೆ ಮಾತ್ರ'ವಾಗಿರಬೇಕು ಎನ್ನುವುದಾಗಿದೆ. ಅವನೊಂದಿಗೆ ಯಾರನ್ನೂ-ಯಾವುದನ್ನೂ ಸಹಭಾಗಿಗಳಾಗಿ ಮಾಡಬಾರದು. ಇದೇ ಎಲ್ಲಕ್ಕಿಂತಲೂ ಪ್ರಾಮುಖ್ಯವಾದ ಆದೇಶವಾಗಿದೆ. ಇದು ಇಸ್ಲಾಮ್ ಧರ್ಮದ ಬುನಾದಿಯಾಗಿದೆ. ಇದನ್ನೇ `ತೌಹೀದ್' ಎಂದು ಕರೆಯುತ್ತಾರೆ.

### ಎಲ್ಲಾ ಪ್ರವಾದಿಗಳ ಧರ್ಮವೂ ಒಂದೇ ಆಗಿದೆ :

ಪ್ರಾರಂಭದಿಂದ ಅಂತ್ಯ ತನಕ ಸರ್ವ ಪ್ರವಾದಿಗಳ ಧರ್ಮವೂ ಒಂದೇ ಆಗಿದೆ. ಅದು `ಅಲ್ಲಾಹನಲ್ಲದೆ ಆರಾಧ್ಯನಿಲ್ಲ'ವೆನ್ನುವ ತತ್ವದಲ್ಲಿ ಅಧಿಷ್ಠಿತವಾಗಿತ್ತು. ಆರಾಧನೆಗಳನ್ನೆಲ್ಲಾ ಕೇವಲ ಅಲ್ಲಾಹನಿಗೆ ಸೀಮಿತಗೊಳಿಸುವುದು ಅವರ ಕಾರ್ಯೋದ್ದೇಶವಾಗಿತ್ತು. ಇದೇ ಧರ್ಮದ ಮೂಲವಾಗಿದೆ. ಪ್ರಥಮ ಪೈಗಂಬರ್ ನೂಹ್(ಅ)ರಿಂದ ಅಂತಿಮ ಪ್ರವಾದಿ ಮುಹಮ್ಮದ್(ಸ)ರವರ ತನಕ ಸರ್ವ ಪ್ರವಾದಿಗಳೂ, ಈ ತತ್ವದ ಪ್ರತಿಷ್ಠಾಪನೆಗಾಗಿ ಪರಿಶ್ರಮಿಸಿದರು. ಇದಕ್ಕೆ ಹೊರತಾದ ಯಾವ ಧರ್ಮವನ್ನೂ ಅಲ್ಲಾಹು ಅಂಗೀಕರಿಸುವುದಿಲ್ಲ.

### ಇದು ಇಸ್ಲಾಮ್ ಧರ್ಮವಾಗಿದೆ :

ಅಲ್ಲಾಹನನ್ನು ಮಾತ್ರ ಆರಾಧನೆಗೆ ಅರ್ಹನಾಗಿ ಒಂಟಿಯಾಗಿಸುವುದಕ್ಕೆ `ತೌಹೀದ್' ಎನ್ನುತ್ತಾರೆ. ಅದರ ಇನ್ನೊಂದು ಹೆಸರು ಇಸ್ಲಾಮ್ ಆಗಿದೆ. ಸಂಪೂರ್ಣವಾಗಿ ಅಲ್ಲಾಹನನ್ನು

ಅನುಸರಿಸುವ , ಅವನು ಆರಾಧ್ಯನೆಂದು ಸಾಕ್ಷ್ಯವಹಿಸುವ, ಅವನ ಒಡೆತನವನ್ನು ಅಂಗೀಕರಿಸಿಕೊಂಡು ಅವನ ಆದೇಶವನ್ನು ಶಿರಸಾವಹಿಸಿ ಅನುಷ್ಠಿಸುವುದು. ಅಂದರೆ ಅಲ್ಲಾಹನು ಮಾತ್ರ ಆರಾಧನೆಗೆ ಅರ್ಹನೆಂದು ದೃಢ ಸಂಕಲ್ಪ ಮಾಡಿಕೊಂಡು ಎಲ್ಲಾ ರೀತಿಯ ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನಿಗಾಗಿ ಮೀಸಲಿರಿಸುವುದೇ ತೌಹೀದ್ ಆಗಿದೆ. ಆದ್ದರಿಂದ ನಿಮ್ಮ ಮುಖವನ್ನು ಅಲ್ಲಾಹನೆಡೆಗೆ ತಿರುಗಿಸಿ ನಿಮ್ಮ ಸತ್ಕರ್ಮಗಳನ್ನು ಕೇವಲ ಅಲ್ಲಾಹನ ಸಂತೃಪ್ತಿಗಾಗಿ ನಿರ್ವಹಿಸಿರಿ. ನಿಮ್ಮ ಶಾರೀರಿಕ ಮತ್ತು ಆತ್ಮೀಯವಾದ ಕರ್ಮಗಳು, ನಿಮ್ಮ ನಿರೀಕ್ಷೆ ಮತ್ತು ಭೀತಿ, ನಿಮ್ಮ ಮಾತು ಮತ್ತು ಕೃತಿ ಮತ್ತು ಎಲ್ಲಾ ಸಂದರ್ಭದಲ್ಲೂ ನಿಮ್ಮ ಹೃದಯವನ್ನು ಅಲ್ಲಾಹನೆಡೆಗೆ ಅಭಿಮುಖೀಕರಿಸಿರಿ.

ಕೇವಲ ಅಲ್ಲಾಹನಿಗಷ್ಟೇ ನಿನ್ನ ಆರಾಧನೆಯಲ್ಲಿ ಪರಿಪೂರ್ಣ ಹಕ್ಕಿರುವುದೆಂದು ನಿನಗೆ ತಿಳಿದಿರಲಿ. ನಿನ್ನ ಅಂಗಾಂಗಗಳೂ-ರಕ್ತದ ಪ್ರತಿಹಣಿಯೂ ಅವನ ಔದಾರ್ಯವೆನ್ನುವ ಸತ್ಯವನ್ನು ತಿಳಿದುಕೊ. ಅವನ ಸ್ತುತಿ-ಅವನ ಪ್ರಶಂಸೆ ವ್ಯಾಪಕಗೊಳಿಸು. ಅವನ ಹೊರತು ಅನ್ಯ ಆರಾಧ್ಯನೂ ಇಲ್ಲ. ಅವನ ಹೊರತು ಸಂರಕ್ಷಕನೂ ಇಲ್ಲ.

**ಶಾಸ್ತ್ರಗಳಲ್ಲಿ ಭಿನ್ನತೆ ಇರಬಹುದು ಆದರೆ ದೀನ್ ಒಂದೇ. ಅದು ಇಸ್ಲಾಮ್ ಆಗಿದೆ :**

ಇನ್ನೀಗ ಶರೀಅತ್‌ನ ವಿಷಯಕ್ಕೆ ಬರೋಣ. ಅದರಲ್ಲಿ ಭಿನ್ನತೆ ಇದ್ದೇ ಇರುತ್ತದೆ. ಈ ಕುರಿತು ಅಲ್ಲಾಹನ ವಚನವನ್ನು ನೋಡೋಣ :

**لِكُلٍّ جَعَلْنَا مِنكُمْ شِرْعَةً وَّمِنْهَا جًا** (سورة المائدة الآية ٤٨)

**"ನಾವು ನಿಮ್ಮ ಪೈಕಿ ಪ್ರತಿಯೊಬ್ಬನಿಗೆ ಒಂದು ಧರ್ಮಶಾಸ್ತ್ರ ಮತ್ತು ಕರ್ಮಮಾರ್ಗವನ್ನು ನಿಶ್ಚಯಿಸಿದೆವು"**

ಆದರೆ ದೀನ್ ಎಲ್ಲರದ್ದೂ ಒಂದೇ ಆಗಿದೆ ಮತ್ತು ಅದು ಇಸ್ಲಾಮ್ ಆಗಿದೆ. ಅಂದರೆ ಆರಾಧನೆಗಳನ್ನು ಕೇವಲ ಅಲ್ಲಾಹನಿಗಾಗಿ ಮೀಸಲಿಡುವುದು. ಆರಾಧನೆಗಳೆಂದರೆ ದುಃಆ ಮಾಡುವುದು, ಆತಂಕ ಪಡುವುದು, ನಿರೀಕ್ಷೆ ಇಡುವುದು, ಬರವಸೆ ಇಡುವುದು, ಅಭಿಲಾಶೆ ಇರಿಸುವುದು, ಆಶಿಸುವುದು (ಐಹಿಕ ಮತ್ತು ಪಾರತ್ರಿಕ ಸವಲತ್ತುಗಳು ಇತ್ಯಾದಿ) ಭಯ ವ್ಯಕ್ತಪಡಿಸುವುದು, ನಮಾಝ್, ಉಪವಾಸ, ಇತ್ಯಾದಿಗಳೆಲ್ಲ ಸಂದರ್ಭದಲ್ಲೂ ಅಲ್ಲಾಹನೆಡೆಗೆ ನಮ್ಮ ಹೃದಯವನ್ನು ಅಭಿಮುಖೀಕರಿಸಿ ಅವನಲ್ಲಿ ನಮ್ಮ ಮನ-ಮಸ್ತಿಷ್ಕಗಳು ಕೇಂದ್ರೀಕೃತವಾಗಿರಬೇಕು. ಅಲ್ಲಾಹನು ಈ ಕುರಿತು ಆದೇಶಿಸುವುದು ನೋಡಿ,

**وَقَضىٰ رَبُّكَ اَلَّا تَعْبُدُوْٓا اِلَّآ اِيَّاهُ** (سورة الاسراء الآية ٢٣)

**"ನೀವು ಕೇವಲ ನಿಮ್ಮ ಪ್ರಭುವಾದ ಅಲ್ಲಾಹನ ಹೊರತು ಇನ್ನಾರನ್ನು ಆರಾದಿಸಬಾರದೆಂದು ಅವನು ವಿಧಿಸಿ ಬಿಟ್ಟಿದ್ದಾನೆ"**

ಅಲ್ಲಾಹು ಹೇಳುತ್ತಾನೆ,

اِيَّاكَ نَعْبُدُ وَاِيَّاكَ نَسْتَعِيْنُ (سورة الفاتحة،الآية ٥)

**"ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ.ನಿನ್ನಿಂದ ಮಾತ್ರ ಸಹಾಯ ಬೇಡುತ್ತೇವೆ"**

ಅಲ್ಲಾಹನು ಈ ಮಾತುಗಳನ್ನು ತನ್ನ ಸೃಷ್ಠಿಗಳಿಗೆ ಏಕೆ ತಿಳಿಸಿಕೊಡುತ್ತಾನೆಂದರೆ ಅವರು ತಮ್ಮ ನಾಲಿಗೆಯಿಂದ ಇದನ್ನು ದೃಢೀಕರಿಸಬೇಕು ಮತ್ತು ಇದನ್ನು ಪಾಲಿಸಿಕೊಂಡು ಜೀವಿಸಲಿ ಎಂದಾಗಿದೆ.

## ಅಲ್ಲಾಹನನ್ನು ಪ್ರಶಂಶಿಸುವುದು ಹೇಗೆ?

ಅಲ್ಲಾಹನನ್ನು ಪ್ರಶಂಶಿಸುವುದು ಹೇಗೆನ್ನುವುದನ್ನು ಕೂಡಾ ಅಲ್ಲಾಹನು ಕಲಿಸಿಕೊಟ್ಟಿದ್ದಾನೆ. ಈ ಕುರಿತಾದ ಅಲ್ಲಾಹನ ನಿರ್ದೇಶನ ಹೀಗಿದೆ.

اَلْحَمْدُ لِلّٰهِ رَبِّ الْعٰلَمِيْنَ، اَلرَّحْمٰنِ الرَّحِيْمِ، مَالِكِ يَوْمِ الدِّيْنِ(سورة الفاتحة، الآيات ٢ ـ ٤)

**"ಅಲ್ಲಾಹನಿಗೇ ಸರ್ವಸ್ತುತಿ ಅವನು ಸಕಲ ವಿಶ್ವದ ಅಧಿಪತಿ, ಪರಮದಯಾಮಯನೂ ಕರುಣಾನಿಧಿಯೂ ವಿಧಿ ನಿರ್ಣಾಯಕ ದಿನದ ಅಧಿಪತಿಯೂ ಅವನೇ ಆಗಿರುವನು"**

ಅಲ್ಲಾಹನು ತನ್ನ ಕುರಿತಾದ ಬಹಳ ದೊಡ್ಡ ಪ್ರಶಂಸೆ ಇದಾಗಿದೆ ಎಂದು ತಿಳಿಸಿಕೊಡುತ್ತಾ إِيَّاكَ نَعْبُدُ **"ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ"** ಎಂದು ಹೇಳಲು ಸೂಚಿಸುತ್ತಾನೆ.

ಅಲ್ಲಾಹನೇ ನಮಗೆಲ್ಲಾ ಅವನನ್ನು ಪ್ರಶಂಶಿಸಬೇಕೆಂದು ನಿರ್ದೇಶಿಸುತ್ತಾನೆ. ನಿಶ್ಚಯವಾಗಿಯೂ ಪ್ರಶಂಶೆಗೆ ಅವನು ಅತ್ಯಂತ ಅರ್ಹಪಟ್ಟವನೇ ಆಗಿದ್ದಾನೆ. ಅವನಿಗೆ ಸ್ತುತಿ ಸಲ್ಲಿಸುವುದು. ಸರ್ವ ಜಗತ್ತಿನ ಪಾಲಕ ಪ್ರಭು ಅವನೆಂದೂ, ಅವನ ಔದಾರ್ಯವಂತನೂ, ಅನುಗ್ರಹಗಳನ್ನು ವರ್ಷಿಸುವವನೂ, ಕರುಣಾ ಸಾಗರನೂ, ಪರಮದಯಾಮಯನೂ, ವಿಧಿ ನಿರ್ಣಾಯಕ ದಿನದ ಅಧಿಪತಿಯೂ ಆಗಿದ್ದಾನೆಂದು ಸಾರಿ ಹೇಳುವುದು ಅವನ ಕೃಪಾಕಟಾಕ್ಷದಿಂದ ಉಸಿರಾಡುತ್ತಿರುವ ನಮ್ಮ ಕರ್ತವ್ಯವಾಗಿದೆ.

ಬಳಿಕ ಅವನು ಹೇಳುತ್ತಾನೆ,

إِيَّاكَ نَعْبُدُ وَإِيَّاكَ نَسْتَعِيْنُ (سورة الفاتحة، الآية ٥)

**"ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನಿಂದಲೇ ಸಹಾಯ ಯಾಚಿಸುತ್ತೇವೆ" ಅವನ ಹೊರತು ಸಂರಕ್ಷಕನಾಗಲೀ ಸಹಾಯಕರಾಗಲೀ ಇಲ್ಲ.**

**ಎಲ್ಲವೂ ಅಲ್ಲಾಹನಿಂದ :**

ಮನುಷ್ಯರಿಗೆ ಬರುವ ಕಷ್ಟ-ಸುಖ, ದುಃಖ-ಸಂತೋಷ, ಲಾಭ-ನಷ್ಟಗಳೆಲ್ಲವೂ ಅಲ್ಲಾಹನಿಂದಲೇ ಬರುತ್ತದೆ. ಅದೇ ಪ್ರಕಾರ ಮನುಷ್ಯರಿಂದ ಉಂಟಾಗುವ ಸಕಾರಾತ್ಮಕ ಪ್ರಕ್ರಿಯೆಗಳು ಕೂಡಾ ಅಲ್ಲಾಹನ ಇಚ್ಛೆ ಪ್ರಕಾರವೇ ಉಂಟಾಗುತ್ತದೆ. ಏಕೆಂದರೆ, ಅಲ್ಲಾಹನೇ ಅವುಗಳನ್ನು ಅವರಿಂದ ಮಾಡಿಸುತ್ತಾನೆ. ಅವನೇ ಅವರಿಗೆ ಅದರ ಜ್ಞಾನವನ್ನು ಪ್ರೇರಣೆಯನ್ನೂ ನೀಡುತ್ತಾನೆ. ಅವನೇ ಅವರಿಗೆ ಆ ಕೆಲಸಕ್ಕೆ ಸಹಾಯ ಮಾಡುತ್ತಾನೆ ಮತ್ತು ಸಾಮರ್ಥ್ಯವನ್ನು ದಯಪಾಲಿಸುತ್ತಾನೆ.

ಅಲ್ಲಾಹು ಹೇಳುತ್ತಾನೆ,

وَمَا بِكُم مِّن نِّعْمَةٍ فَمِنَ اللَّهِ" (سورة النحل، الآية ٥٣)

**"ನಿಮಗೆ ಬರುವ ಎಲ್ಲಾ ಭವ್ಯ ಕೊಡುಗೆಗಳೂ ಅಲ್ಲಾಹನ ಕಡೆಯಿಂದಲೇ ಆಗಿರುತ್ತವೆ"**

ಅಲ್ಲಾಹನ ಅಸ್ತಿತ್ವವು ನಿರಾಕರಿಸಲಾಗದ ಸತ್ಯವಾಗಿದ್ದು ಅವನಿಂದಲೇ ಸಹಾಯ-ಅಭಯಯಾಚಿಸಲಾಗುತ್ತದೆ. ಅವನೇ ಸರ್ವ ಜನರ ಆರಾಧ್ಯನಾಗಿದ್ದಾನೆ(ಅಂಗೀಕರಿಸಿದರೂ ನಿರಾಕರಿಸಿದರೂ)

ಹೇ ಅಲ್ಲಾಹನ ದಾಸನೇ! ನಿನಗೆ ಲಭಿಸುವ ಯಾವುದೇ ರೀತಿಯ ಸಹಾಯ-ಸಹಕಾರ, ಸೌಲಭ್ಯ-ಸವಲತ್ತು. ಅದು ಓರ್ವ ಕೂಲಿಯಿಂದ ಲಭಿಸಲಿ ಅಥವಾ ಮಂತ್ರಿ ಮಹಾಶಯರಿಂದ, ನೆನಪಿಡು, ಅದು ಸರ್ವಶಕ್ತನಾದ ಅಲ್ಲಾಹನ ಔದಾರ್ಯವಾಗಿದೆ. ಅವನೇ ನಿನಗದು ಲಭಿಸುವಂತೆ ಮಾಡುತ್ತಾನೆ ಅವನೇ ಆ ವ್ಯಕ್ತಿಗಳಿಗೆ ಅದನ್ನು ನಿನಗೆ ನೀಡುವಂತಹಾ ಸೌಲಭ್ಯವನ್ನು ಸರಳೀಕರಿಸುತ್ತಾನೆ. ಆ ವ್ಯಕ್ತಿಯನ್ನು ಸೃಷ್ಟಿಸಿದವನೂ - ಈ ಕಾರ್ಯವನ್ನು ಅವನಿಂದ ಮಾಡಿಸುವವನೂ ಅವನ ಹೃದಯದಲ್ಲಿ ಈ ಕಾರ್ಯವೆಸಗುವಂತಹಾ ಪ್ರೇರಣೆ ನೀಡುವವನೂ ಅಲ್ಲಾಹನೇ ಆಗಿದ್ದಾನೆ. ಅವನ ಹೃದಯ-ಬುದ್ಧಿ ಮತ್ತು ಸಾಮರ್ಥ್ಯವು ಅಲ್ಲಾಹನ ಔದಾರ್ಯವೇ ಆಗಿದೆ. ಅವನ ಹೃದಯದಲ್ಲಿ ಅದನ್ನು ನಿನಗೆ ನೀಡುವಂತಹಾ ಪ್ರೇರಣೆಯನ್ನುಂಟು ಮಾಡಿ ಆ ವಸ್ತುವನ್ನು ದಾನ ಮಾಡಬಲ್ಲ ಶಕ್ತಿ-ಸಾಮರ್ಥ್ಯವನ್ನು ನೀಡಿ ಆ ವಸ್ತುವನ್ನು ನಿನಗೆ ತಲುಪಿಸುವಂತೆ ಮಾಡಿದವನು ಮಹಾ ಉದಾರಿಯೂ-ಮಹಾ ಮಹಿಮನೂ ಆದ ಅಲ್ಲಾಹನಾಗಿದ್ದಾನೆ. ಆದ್ದರಿಂದ ಸರ್ವ ನಿಅ್‌ಮತ್(ಸವಲತ್ತುಗಳು) ಲೋಕ ನಿರ್ಮಾತೃನಾದ ಅಲ್ಲಾಹನಿಂದಾಗಿರುತ್ತದೆ. ಅದು ಲಭಿಸುವ ಮಾಧ್ಯಮ ಬೇರೆ-ಬೇರೆಯಾಗಿರಬಹುದು.

## ಆರಾಧಿಸಲ್ಪಡುವ ಹಕ್ಕು ಅಲ್ಲಾಹನಿಗೆ ಮಾತ್ರವಿದೆ :

ಆರಾಧಿಸಲ್ಪಡುವ ಹಕ್ಕು ಅಲ್ಲಾಹನಿಗೆ ಮಾತ್ರವಿದೆ. ಏಕೆಂದರೆ, ಅವನೇ ಸರ್ವ ಸೃಷ್ಟಿಗಳ ಸೃಷ್ಟಿಕರ್ತನಾಗಿರುವನು. ತನ್ನ ಔದಾರ್ಯದಿಂದ ಸರ್ವಸೃಷ್ಟಿಜಾಲಗಳಿಗೆ ಜೀವಿಸುವ ವ್ಯವಸ್ಥೆಯನ್ನುಂಟು ಮಾಡಿಕೊಡುವವನೂ ಅವನೇ. ಈ ಲೋಕ ಮತ್ತು ಪರಲೋಕದಲ್ಲಿ ತನ್ನ ಸೃಷ್ಟಿಗಳ ಕುರಿತು ಅವನು ನೀಡುವ ಆದೇಶವೇ ಜ್ಯಾರಿಗೊಳ್ಳುವುದು. ಸರ್ವ ರೀತಿಯಲ್ಲೂ

ಅದ್ಭುತಕರ ವೈಶಿಷ್ಟ್ಯಗಳು ಅವನಿಗೇ ಇದೆ. ಯಾವುದೇ ರೀತಿಯ ಕುಂದು ಕೊರತೆಗಳಿಂದ ಅವನು ಪರಿಶುದ್ಧನಾಗಿರುವನು. ಅವನು ತನ್ನ ರುಬೀಬಿಯತ್, ಮಅಬೂದಿಯತ್ ಮತ್ತು ಅಸ್ಮಾಅ್ವ ಸಿಫಾತ್‌ಗಳಲ್ಲಿ ಏಕನೇ ಆಗಿದ್ದಾನೆ. ಎಲ್ಲಾ ರೀತಿಯಲ್ಲೂ ಅವನು ಏಕನೇ ಆಗಿದ್ದಾನೆ. ಸೃಷ್ಟಿಸುವ-ಸಂರಕ್ಷಣೆ ನೀಡುವ ಜೀವನಾವಶ್ಯಕತೆ ಒದಗಿಸುವ, ಸೃಷ್ಟಿಗಳ ಅವಸ್ಥೆಗಳನ್ನು ಬದಲಿಸುವ ಕಾರ್ಯದಲ್ಲೂ ಅವನು ಏಕನೇ ಆಗಿರುತ್ತಾನೆ. ಈ ಕಾರ್ಯಗಳಲ್ಲಿ ಅವನ ಏಕ ಸ್ವಾಮ್ಯವು ಸಾಬೀತುಗೊಂಡಿದೆ. ಈ ಕಾರ್ಯಗಳಲ್ಲಿ ಇನ್ನಾವಬಾಗೀದಾರರೂ ಇರುವುದಿಲ್ಲ. ಆದ್ದರಿಂದ ಆರಾಧಿಸಲ್ಪಡುವ ಹಕ್ಕು ನಿಶ್ಚಿತವಾಗಿಯೂ ಅಲ್ಲಾಹನೊಬ್ಬನಿಗೆ ಮಾತ್ರವಿರುವುದು.

## ಎಲ್ಲವೂ ಅಲ್ಲಾಹನ ಸೃಷ್ಟಿಗಳಾಗಿವೆ

ಗೋಚರವೂ ಅಗೋಚರವೂ ಆದ ಸರ್ವವಸ್ತುಗಳನ್ನೂ ಸೃಷ್ಟಿಸಿ ವ್ಯವಸ್ಥಾಪನೆಗೊಳಿಸಿದವನು ಅಲ್ಲಾಹನಾಗಿದ್ದಾನೆ. ಅಲ್ಲಾಹನ ವಚನ ನೋಡಿ

اَللّٰهُ خَالِقُ كُلِّ شَيْءٍ وَّهُوَ عَلٰى كُلِّ شَيْءٍ وَّكِيْلٌ (سورة الزمر، الآية ٦٢)

**"ಅಲ್ಲಾಹ್ ಸಕಲ ವಸ್ತುಗಳ ಸೃಷ್ಟಿಕರ್ತನು ಮತ್ತು ಅವನೇ ಸಕಲ ವಸ್ತುಗಳ ಮೇಲ್ವಿಚಾರಕನಾಗಿರುವನು"**

ಅಲ್ಲಾಹನು ಇನ್ನೊಂದು ಕಡೆ ಹೀಗೆ ಹೇಳುತ್ತಾನೆ,

اِنَّ اللّٰهَ هُوَ الرَّزَّاقُ ذُو الْقُوَّةِ الْمَتِيْنُ (سورة الذاريات، الآية ٥٨)

**"ಅಲ್ಲಾಹನು ಸ್ವಯಂ ಮಹಾ ಅನ್ನದಾತನೂ, ಮಹಾಶಕ್ತಿಶಾಲಿ ಮತ್ತು ಪ್ರಚಂಡನಾಗಿದ್ದಾನೆ"**

ಮತ್ತೊಂದು ಕಡೆ ಅಲ್ಲಾಹನ ವಚನ ಹೀಗಿದೆ.

اِنَّ رَبَّكُمُ اللّٰهُ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ ثُمَّ
سْتَوٰى عَلَى الْعَرْشِ، يُدَبِّرُ الْاَمْرَ مَا مِنْ شَفِيْعٍ اِلَّا مِنْ م بَعْدِ اِذْنِهٖ
ذٰلِكُمُ اللّٰهُ رَبُّكُمْ فَاعْبُدُوْهُ اَفَلَا تَذَكَّرُوْنَ• اِلَيْهِ مَرْجِعُكُمْ جَمِيْعاً

(سورة يونس، الآيتان٣،٤)

**"ವಾಸ್ತವದಲ್ಲಿ ಆಕಾಶಗಳನ್ನೂ ಭೂಮಿಯನ್ನೂ ಆರು ದಿನಗಳಲ್ಲಿ ಸೃಷ್ಟಿಸಿದ, ಅನಂತರ ವಿಶ್ವ ಸಿಂಹಾಸನದಲ್ಲಿ ವಿರಾಜಿಸಿ ವಿಶ್ವಾಡಳಿತ ನಡೆಸುತ್ತಿರುವ ಅಲ್ಲಾಹನೇ ನಿಮ್ಮ ಪಾಲಕ ಪ್ರಭು. ಅವನ ಅನುಮತಿ ದೊರೆತ ಬಳಿಕವೇ ವಿನಾ ಯಾರೂ ಶಿಫಾರಸ್ಸು ಮಾಡುವವರಿಲ್ಲ. ಈ ಅಲ್ಲಾಹನೇ ನಿಮ್ಮ ಪಾಲಕ ಪ್ರಭು. ಆದುದರಿಂದ ನೀವು ಅವನ ಇಬಾದತನ್ನೇ ಮಾಡಿರಿ. ನೀವು ಎಚ್ಚರಗೊಳ್ಳುವುದಿಲ್ಲವೇ? ನಿಮಗೆಲ್ಲರಿಗೂ ಅವನ ಕಡೆಗೇ ಮರಳಿ ಹೋಗಲಿಕ್ಕಿದೆ."**

ಅಲ್ಲಾಹನೇ ನಮ್ಮ ಒಡೆಯನೂ-ಆಶ್ರಯದಾತನೂ-ಸೃಷ್ಟಿಕರ್ತನೂ ಅನ್ನದಾತನೂ-ಸರ್ವ

ವಸ್ತುಗಳ ವ್ಯವಸ್ಥಾಪಕನೂ ಆಗಿರುವುದರಿಂದ ನಮ್ಮ ಆರಾಧನೆಗೆ ಏಕೈಕ ಹಕ್ಕುದಾರನಾಗುತ್ತಾನೆ. ಆದ್ದರಿಂದಲೇ ನಾವೆಲ್ಲರೂ ಅವನನ್ನು ಮಾತ್ರ ಆರಾಧಿಸಲು ನಿರ್ಬಂಧಿತರಾಗುತ್ತೇವೆ.

### ಇಬಾದತ್ (ಆರಾಧನೆ)ನ ಅರ್ಥ ವಿವರಣೆ :

ಸಂಪೂರ್ಣವಾಗಿ ಸಮರ್ಪಿಸಿಕೊಂಡು ವಿಧೇಯತೆ ಪ್ರಕಟಿಸುವುದಕ್ಕೆ ಇಬಾದತ್ ಎಂದು ಹೇಳುತ್ತಾರೆ. ಅದೇ ಅರ್ಥವನ್ನು ನೀಡಿ `ದೀನ್'ಗೆ ಇಬಾದತ್ ಎಂದು ಕರೆಯುತ್ತಾರೆ. ಏಕೆಂದರೆ ದಾಸನು ಅಲ್ಲಾಹನಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡು ವಿಧೇಯತೆಯನ್ನು ಪ್ರಕಟಿಸುತ್ತಾ ಧಾರ್ಮಿಕ ಕಾರ್ಯಗಳನ್ನು ನಿಷ್ಠೆಯಿಂದ ನಿರ್ವಹಿಸುತ್ತಾನೆ. ಇದೇ ಕಾರಣದಿಂದ ಇಸ್ಲಾಮ್‌ಗೆ ಇಬಾದತ್ ಅಥವಾ ಆರಾಧನೆ ಎಂದು ಕರೆಯಲಾಗುತ್ತದೆ.

ಅರಬರು ಹೇಳುವಂತೆ طَرِيْقٌ مُعَبَّدٌ ಅಂದರೆ ಸಮತಟ್ಟಾದದಾರಿ ಅದರ ಮೇಲೆ ನಡೆದಾಡುವ ಜನರ ಪಾದಗಳ ಸ್ಪರ್ಶದಿಂದಲೇ ಅದು ಹದಗೊಂಡು ಸಮತಟ್ಟಾಗಿ ಬಿಡುತ್ತದೆ ಹಾಗೆ ಅದರ ಮೇಲೆ ಸ್ಪಷ್ಟ ನಿಶಾನಿ ಗೋಚರಿಸುತ್ತದೆ. ಅದನ್ನು ದೂರದಿಂದ ನೋಡುತ್ತಲೇ ಗುರುತಿಸಿಕೊಳ್ಳಬಹುದಾಗಿದೆ. ಅದೇ ಪ್ರಕಾರ (بَعِيْرٌ مُعَبَّدٌ) ಎಂದು ಕರೆಯಲಾಗುತ್ತದೆ ಹೇಗೆಂದರೆ, ಒಬ್ಬನು ಒಂಟೆಯ ಮೇಲೆ ಪ್ರಯಾಣ ಬೆಳೆಸಿದ. ಎಲ್ಲಿಯವರೆಗೆಂದರೆ ಅದರ ಮೇಲೆ ನಿಶಾನಿ ಬಿತ್ತು. ಹಾಗೆ ಅದು ಬಳಸಲಾದ ಒಂಟೆ ಆಗಿ ಬಿಡುತ್ತದೆ.

**(ಅಬ್ದ್) ದಾಸ :** ಅಲ್ಲಾಹನಿಗಾಗಿ ಸಂಪೂರ್ಣ ಸಮರ್ಪಿಸಿಕೊಳ್ಳುವವನ್ನು ಅಲ್ಲಾಹನ ದಾಸನೆಂದು ಕರೆಯಬಹುದಾಗಿದೆ. ಅವನು ಕೇವಲ ಅಲ್ಲಾಹನ ವಿಧಿ-ನಿರ್ದೇಶನಗಳನ್ನಷ್ಟೇ ಪಾಲಿಸುತ್ತಾನೆ. ಅವನ ಆದೇಶವನ್ನು ಪಾಲಿಸಿ ಜೀವಿಸುವುದು ಅವನು ವಿರೋಧಿಸುವ ಯಾವುದೇ ಕರ್ಮಗಳನ್ನು ಪ್ರವರ್ತಿಸದಿರುವುದು ಅವನ ಪ್ರತ್ಯೇಕತೆಯಾಗಿರುತ್ತದೆ. ಒಬ್ಬ ದಾಸನು ಅಲ್ಲಾಹನನ್ನು ಪರಿಪೂರ್ಣವಾಗಿ ಅರಿತುಕೊಂಡು ವಿಶ್ವಾಸವಿರಿಸಿ ಅವನ ಹಾದಿಯಲ್ಲಿ ಪ್ರವರ್ತಿಸುತ್ತಾನೆಂದಾದರೆ ಅವನು ಪರಿಪೂರ್ಣವೂ ಪಕ್ವವೂ ಆದ ಇಬಾದತ್(ಆರಾಧನೆ) ನಿರ್ವಹಿಸುವವನೆಂದು ಕೊಳ್ಳುತ್ತಾನೆ.

### ಜನರಲ್ಲಿ ಅತ್ಯಂತ ಹೆಚ್ಚು ಇಬಾದತ್ ನಿರ್ವಹಿಸು ವವರುಪ್ರವಾದಿಗಳಾಗಿದ್ದಾರೆ:

ಎಲ್ಲಾ ಪ್ರವಾದಿಗಳು ಜನರಲ್ಲಿ ಅತ್ಯಂತ ಹೆಚ್ಚು ಮತ್ತು ಪರಿಪೂರ್ಣ ಇಬಾದತ್ ನಿರ್ವಹಿಸುವವರಾಗಿದ್ದಾರೆ. ಏಕೆಂದರೆ ಅವರು ಇತರರಿಗಿಂತ ಹೆಚ್ಚಾಗಿ ಅಲ್ಲಾಹನನ್ನು ಅರಿತುಕೊಂಡವರೂ ಅವನನ್ನು ಅತ್ಯಂತ ಹೆಚ್ಚು ಭಯಪಡುವವರೂ ಅತ್ಯುತ್ತಮ ಮತ್ತು ಪರಿಪೂರ್ಣ ರೀತಿಯಲ್ಲಿ ಅವನ ಆರಾಧನಾ ಕರ್ಮ ನಿರ್ವಹಿಸುವವರೂ ಆಗಿದ್ದಾರೆ. ಅಲ್ಲಾಹನು ಅವನ ಸಂದೇಶವಾಹಕರಾದ ಮುಹಮ್ಮದ್(ಸ)ರಿಗೆ ಅತ್ಯಂತ ಉನ್ನತ ಸ್ಥಾನವನ್ನೂ ಗೌರವವನ್ನು ದಯಪಾಲಿಸಿದ್ದಾನೆ. ಅವನು ಪವಿತ್ರ ಕುರ್‌ಆನಿನಲ್ಲಿ ಹೇಳುತ್ತಾನೆ,

سُبْحٰنَ الَّذِىْٓ اَسْرٰى بِعَبْدِهٖ (سورة الاسراء، الآية ١)

**“ತನ್ನ ದಾಸನನ್ನು ಒಂದು ರಾತ್ರಿಯಲ್ಲಿ ಕೊಂಡು ಹೋದವನು ಪರಮ ಪಾವನನು”**
ಮತ್ತೊಂದು ಕಡೆ ಅಲ್ಲಾಹನ ವಚನ ಹೀಗಿದೆ.

اَلْحَمْدُلِلّٰهِ الَّذِىْٓ اَنْزَلَ عَلٰي عَبْدِهِ الْكِتَابَ (سورة الكهف، الآية ١)

**“ತನ್ನ ದಾಸನ ಮೇಲೆ ಈ ಗ್ರಂಥವನ್ನು ಇಳಿಸಿದ ಅಲ್ಲಾಹನಿಗೆ ಸರ್ವಸ್ತುತಿ”**

ಮತ್ತೊಂದು ವಚನದಲ್ಲಿ ಹೀಗೆನ್ನುತ್ತಾನೆ,

وَاَنَّهٗ لَمَّا قَامَ عَبْدُ اللّٰهِ يَدْعُوْهُ (سورة الجن، الآية ١٩)

**“ಅಲ್ಲಾಹನ ದಾಸನು ಅವನನ್ನು ಪ್ರಾರ್ಥಿಸಲಿಕ್ಕಾಗಿ ನಿಂತಾಗ”**
ಈ ವಿಷಯದ ಕುರಿತು ಇಷ್ಟು ಮಾತ್ರವಲ್ಲದೆ ಇನ್ನೂ ಹಲವಾರು ವಚನಗಳೂ ಇವೆ.

‘ಆರಾಧ್ಯ’ನೆನ್ನುವ ಸ್ಥಾನವು ವಾಸ್ತವದಲ್ಲಿ ಒಂದು ಅತ್ಯುನ್ನತವೂ, ವರ್ಣನಾತೀತವೂ, ಅದ್ವಿತೀಯವೂ ಆದ ಸ್ಥಾನವಾಗಿದೆ. ಆ ಸ್ಥಾನಕ್ಕೆ ಅನುಗುಣವಾಗಿ ಅಲ್ಲಾಹನು ತನ್ನ ಪ್ರವಾದಿಗಳಿಗೆ ಪ್ರವಾದಿತ್ವವನ್ನು ನೀಡಿ ಗೌರವಿಸಿದ್ದಾನೆ ಮತ್ತು ತನ್ನಸಂದೇಶವಾಹಕರನ್ನಾಗಿ ಕಳುಹಿಸಿದ್ದಾನೆ.

## ಪ್ರವಾದಿಗಳಲ್ಲಿ 2 ವೈಶಿಷ್ಟತೆಗಳಿರುತ್ತದೆ.

ಪ್ರವಾದಿಗಳಲ್ಲಿ ಎರಡು ವೈಶಿಷ್ಟ್ಯತೆಗಳು ಸಮ್ಮಿಳಿತವಾಗಿರುತ್ತದೆ.

1. ರಿಸಾಲತ್ ಅಂದರೆ ಪ್ರವಾದಿತ್ವದ ವಿಶಿಷ್ಟ ಸ್ಥಾನಮಾನ
2. ನಿಷ್ಠೆ ಮತ್ತು ಆತ್ಮಾರ್ಥತೆಯಿಂದ ಅಲ್ಲಾಹನನ್ನು ಮಾತ್ರ ಆರಾಧಿಸುವವರೆಂಬ ಹೆಗ್ಗಳಿಕೆ

ಆರಾಧನೆಯನ್ನು ಅಲ್ಲಾಹನಿಗಾಗಿ ಮಾತ್ರ ಮೀಸಲಾಗಿರಿಸುವ ಮತ್ತು ಅವನಿಗೆ ಭಯ-ಭಕ್ತಿ ಪ್ರಕಟಿಸುವ ವಿಷಯದಲ್ಲಿ ಮನುಷ್ಯರ ಪೈಕಿ ಪ್ರವಾದಿಗಳನ್ನು ಮೀರಿಸುವವರು ಯಾರೂ ಇರುವುದಿಲ್ಲ. ಅವರ ನಂತರದ ಸ್ಥಾನ ಅಲ್ಲಾಹನನ್ನೂ ಅವನ ಪ್ರವಾದಿಗಳನ್ನೂ ಪರಿಪೂರ್ಣ ರೀತಿಯಲ್ಲಿ ಅನುಸರಿಸಿಕೊಂಡು ಅವರ ಧರ್ಮವನ್ನು ಬಿಗಿಯಾಗಿ ಹಿಡಿದು ಅದಕ್ಕಾಗಿ ಸರ್ವತ್ಯಾಗಗಳನ್ನು ಸಹಿಸಿದ ಸಿದ್ದೀಖ್‌ಗಳದ್ದಾಗಿದೆ. ಈ ಪೈಕಿ ಮುಂಪಂಕ್ತಿಯಲ್ಲಿರುವವರು ಹಝ್ರತ್ ಅಬೂಬಕರ್ (ರ)ರವರಾಗಿದ್ದಾರೆ. ಅವರು ಸರ್ವ ಸಿದ್ದೀಖೀನರ ಸರದಾರರಾಗಿದ್ದಾರೆ. ಅವರು ತಮ್ಮ ವೈಶಿಷ್ಟತೆ, ತಖ್ವಾ ಮತ್ತು ಸಮರ್ಪಣೆಗಳಿಂದ ಈ ಉನ್ನತ ಸ್ಥಾನ ಸಂಪಾದಿಸಿದರು. ಅಲ್ಲಾಹನ ಧರ್ಮವನ್ನು ಅತ್ಯುತ್ತಮ ರೀತಿಯಲ್ಲಿ ಅಳವಡಿಸಿಕೊಂಡು ಅವನ ಸಂದೇಶವಾಹಕರ ಜೀವನದ ಅವಿಸ್ಮರಣೀಯ ಘಟನೆಗಳಲ್ಲೆಲ್ಲಾ ಅವರ ಜೊತೆಗಾರನಾಗಿ, (ಸೌರ್‌ಗುಹೆಯಲ್ಲಿನ ಸಂಗಾತಿಯಾಗಿ) ತನ್ನ ಸರ್ವಶಕ್ತಿ-ಸಂಪತ್ತು-ಸಾಮರ್ಥ್ಯಗಳನ್ನು ಅವರ ಸಹಾಯಕ್ಕಾಗಿ ಸಮರ್ಪಿಸಿಕೊಂಡ ಅವರ ಬದುಕು ಪರಮ ಸಾರ್ಥಕವೆಂದು ಪರಿಗಣಿಸಲ್ಪಟ್ಟಿತು. ರಳಿಯಲ್ಲಾಹು ಅನ್‌ಹು ವರಳೂ ಅನ್‌ಹು (ಅವರು ಅಲ್ಲಾಹನಿಂದಲೂ ಅಲ್ಲಾಹು ಅವರಿಂದಲೂ ಸಂತೃಪ್ತರಾದರು)

## ದಾಸ ಮತ್ತು ಪ್ರವಾದಿಗಳೆಂಬ ಪದವಿಗಳ ಔನ್ನತ್ಯ

ಇಲ್ಲಿ ಈ ವಿಷಯವನ್ನು ಪ್ರಸ್ತಾಪಿಸುವ ಉದ್ದೇಶ ದಾಸ ಅಥವಾ ಆರಾಧಕನ ಸ್ಥಾನ ಮತ್ತು ಪ್ರವಾದಿತ್ವವೆಂಬ ಪದವಿ ಎರಡೂ ಅತ್ಯಂತ ಉನ್ನತವೂ ಶ್ರೇಷ್ಟವೂ ಆದುದೇ ಆಗಿದೆ. ಪ್ರವಾದಿತ್ವದ ಶೃಂಖಲೆಯು ಗೌರವಪೂರ್ವಕವಾಗಿ ಕೊನೆಗೊಂಡ ಬಳಿಕ ಸಿದ್ದೀಖ್ ಎಂಬ ಸ್ಥಾನವು ಆರಾಧನೆಯ ಮಾನದಂಡದ ಮೇಲೆ ನೆಲೆಗೊಂಡಿತು.

ಜನರಲ್ಲಿ ಪರಿಪೂರ್ಣ ಈಮಾನ್‌ಸಂಸ್ಕರಣೆ-ಭಯಭಕ್ತಿ ಸನ್ಮಾರ್ಗದರ್ಶನ ಮತ್ತು ಅಲ್ಲಾಹನ ಕುರಿತು ಪರಿಪೂರ್ಣ ಅರಿವು, ಅವನಿಗೇ ಮೀಸಲಾದ ಆರಾಧನೆ-ಉಪಾಸನೆ, ಅವನಿಗೆ ಸಮರ್ಪಿತ ಜೀವನ, ಅವನ ಔನ್ನತ್ಯವನ್ನು ಸಾರುವ ಅವನ ಮುಂದೆ ತನ್ನ ಅಸಹಾಯಕತನವನ್ನು ಒಪ್ಪಿಕೊಳ್ಳುವ ಮನೋಬಾವದಲ್ಲಿ ಪ್ರವಾದಿಗಳೇ ಸರ್ವಪ್ರಥಮರಾಗಿರುತ್ತಾರೆ. ಅವರ ನಂತರದ ಸ್ಥಾನ ಸಿದ್ದೀಖೀನರಿಗೂ ಆ ಬಳಿಕ ಶುಹದಾಗಳಿಗೂ ಕಡೆಗೆ ಸ್ವಾಲಿಹೀನರಿಗೂ ಸಲ್ಲುತ್ತದೆ. ಈ ಕುರಿತು ಅಲ್ಲಾಹನೇ ವಿವರ ನೀಡುವುದು ಹೀಗೆ.

وَمَنْ يُطِعِ اللّٰهَ وَالرَّسُوْلَ فَاُولٰئِكَ مَعَ الَّذِيْنَ اَنْعَمَ اللّٰهُ عَلَيْهِمْ مِنَ النَّبِيّٖنَ وَالصِّدِّيْقِيْنَ وَالشُّهَدَآءِ وَالصَّالِحِيْنَ وَحَسُنَ اُولٰئِكَ رَفِيْقًا (سورة النساء ،الآية ٦٩)

“ಅಲ್ಲಾಹ್ ಮತ್ತು ಸಂದೇಶವಾಹಕರನ್ನು ಅನುಸರಿಸುವವರು ಅಲ್ಲಾಹನಿಂದ ಸಕಲ ಸೌಭಾಗ್ಯಗಳನ್ನು ಹೊಂದಿದ ಪ್ರವಾದಿಗಳ, ಸಿದ್ದೀಖೀನರ, ಹುತಾತ್ಮರ ಮತ್ತು ಸಜ್ಜನರ ಸಹವಾಸದಲ್ಲಿರುವವರು’’(4-69)

**ಏಕದೇವ ಸಂಕಲ್ಪದೊಂದಿಗೆ ಪ್ರವಾದಿಗಳ ಮೇಲಿನ ವಿಶ್ವಾಸವೂ ಅತ್ಯಗತ್ಯವಾಗಿದೆ :**

ಆರಾಧಿಸಲ್ಪಡುವ ಹಕ್ಕು ಮತ್ತು ಅರ್ಹತೆ ಏಕೈಕನಾದ ಅಲ್ಲಾಹನಿಗಷ್ಟೇ ಇದೆ ಎಂದು ತಿಳಿದುಕೊಂಡ ಬಳಿಕ ಪ್ರವಾದಿಗಳ ಕುರಿತು ದೃಢೀಕರಿಸಿಕೊಳ್ಳುವುದೂ ಅವಶ್ಯಕವಾಗಿದೆ. ಆದ್ದರಿಂದಲೇ ಪ್ರವಾದಿ ಮುಹಮ್ಮದ್(ಸ)ರವರು ಅಲ್ಲಾಹ ಸಂದೇಶವಾಹಕರಾಗಿ ನಿಯುಕ್ತಿ ಹೊಂದಿದಾಗಲೇ ಸರ್ವ ಪ್ರಥಮವಾಗಿ ಜನರಿಗೆ ಆರಾಧನೆಗೆ ಅರ್ಹನಾದವನು ಕೇವಲ ಅಲ್ಲಾಹನು ಮಾತ್ರನೆಂದು ಸಾರಿ ಹೇಳುವುದರೊಂದಿಗೆ ನಾನು ಅಲ್ಲಾಹನ ಪ್ರವಾದಿಯೆಂದೂ ಪರಿಚಯಿಸಿದರು.

ಈ ಕುರಿತಾಗಿ ಎರಡು ವಿಷಯಗಳನ್ನು ತಿಳಿಸುವುದು ಅನಿವಾರ್ಯವಾಗಿದೆ.

(1) ಅಲ್ಲಾಹನ ಏಕತ್ವವನ್ನು ಒಪ್ಪಿಕೊಳ್ಳುವುದು ಅಥವಾ ಆರಾಧನೆಗೆ ಅರ್ಹನಾದವನು ಅಲ್ಲಾಹನಲ್ಲದೆ ಅನ್ಯರಿಲ್ಲವೆಂದು ದೃಢಪಡಿಸಿಕೊಳ್ಳುವುದು ಮತ್ತು ಆರಾಧನೆಯನ್ನು ಕೇವಲ ಅವನಿಗಾಗಿ ಮೀಸಲಾಗಿರಿಸುವುದು. (2) ಇವರೊಂದಿಗೆ ಪ್ರವಾದಿಗಳ ಕುರಿತು ದೃಢೀಕರಿಸಿಕೊಳ್ಳುವುದು ಅಥವಾ ಅವರ ಪ್ರವಾದಿತ್ವವನ್ನು ಸತ್ಯವೆಂದು ಅಂಗೀಕರಿಸುವುದು ಕೂಡಾ ಅತ್ಯಾವಶ್ಯಕ ಸಂಗತಿಯಾಗಿದೆ.

ಯಾರಾದರೂ ದೇವಾಸ್ತಿತ್ವವನ್ನು ಅಂಗೀಕರಿಸಿಕೊಂಡು ಏಕದೇವತ್ವವನ್ನು ಸ್ವೀಕರಿಸಿಕೊಳ್ಳದಿದ್ದರೆ ಅವನು ಕಾಫಿರ್ ಎಂದು ಪರಿಗಣಿಸಲ್ಪಡುವಂತೆಯೇ ಏಕದೇವತ್ವವನ್ನು ಅಂಗೀಕರಿಸಿಕೊಂಡು ಪ್ರವಾದಿತ್ವವನ್ನು ನಿರಾಕರಿಸಿದರೂ ಅವನು ಕಾಫಿರ್ ಎಂದೇ ಪರಿಗಣಿಸಲ್ಪಡುವವನು. ಇನ್ನು ಪ್ರವಾದಿತ್ವವನ್ನು ಒಪ್ಪಿಕೊಂಡು ತೌಹೀದ್(ಏಕದೇವತ್ವ)ವನ್ನು ಅಂಗೀಕರಿಸದವನೂ ಕಾಫಿರ್(ಸತ್ಯ ನಿಷೇಧಿ) ಆಗಿರುವನು. ಆದ್ದರಿಂದ ಈ ಎರಡು ವಿಷಯಗಳನ್ನು ಅಂಗೀಕರಿಸುವುದು ಅನಿವಾರ್ಯವಾಗಿದೆ. (1) ಆರಾಧನೆಗೆ ಅರ್ಹನಾದವನು ಅಲ್ಲಾಹನು ಮಾತ್ರ (2) ಪ್ರವಾದಿತ್ವ ಸತ್ಯವೂ ಅನಿವಾರ್ಯವೂ ಆಗಿದೆ.

### ತೌಹೀದ್ ಮತ್ತು ರಿಸಾಲತ್‌ನ ಕುರಿತು ಪ್ರವಾದಿಗಳಲ್ಲಿ ಭಿನ್ನಮತವಿಲ್ಲ:

ಶರೀಅತ್‌ನಲ್ಲಿ ವ್ಯತ್ಯಾಸಗಳಿವೆ ಅದನ್ನು ಈ ಮೊದಲೇ ನಾವು ವಿವರಿಸಿದ್ದೇವೆ. ಆದರೆ, ತೌಹೀದ್ ಅಥವಾ ಏಕದೇವ ಪರಿಕಲ್ಪನೆಯಲ್ಲಿ, ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನಿಗಾಗಿ ಮೀಸಲಾಗಿರಿಸುವ ವಿಷಯದಲ್ಲಿ, ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸಿಕೊಳ್ಳಬಾರದೆಂಬ ನೆಲೆಯಲ್ಲಿ ಮತ್ತು ಅವನ ಪ್ರವಾದಿಗಳ ಕುರಿತು ವಿಶ್ವಾಸವಿಡುವುದರಲ್ಲಿ ಪ್ರವಾದಿಗಳ ಮಧ್ಯೆ ಯಾವುದೇ ರೀತಿಯ ಭಿನ್ನಮತವಿರಲೇ ಇಲ್ಲ.

ಇಸ್ಲಾಮ್, ದೀನ್, ಹಿದಾಯತ್ ಮತ್ತು ಮುಕ್ತಿಯು ಕೇವಲ ಅಲ್ಲಾಹನ ತೌಹೀದ್ ಅಥವಾ ಏಕದೇವ ಸಂಕಲ್ಪ, ಆರಾಧನಾ ಕರ್ಮಗಳನ್ನು ಅಲ್ಲಾಹನಿಗೆ ಮೀಸಲಾಗಿರಿಸುವುದು ಮತ್ತು ಸತ್ಯವಚನಗಳೊಂದಿಗೆ ಆಗಮಿಸಿದ ಪ್ರವಾದಿಗಳ ಕುರಿತು ಸತ್ಯಸಾಕ್ಷ್ಯ ವಹಿಸುವುದರಿಂದ ಅವರ ಮಾತು ಸಂಪೂರ್ಣವಾಗಿ ಮತ್ತು ಅಕ್ಷರಸಃ ಸತ್ಯವೆಂದು ವಿಶ್ವಾಸವಿಡುವುದರಿಂದಲೇ ಪ್ರಾಪ್ತಿಯಾಗುತ್ತದೆ.

ಒಬ್ಬ ವ್ಯಕ್ತಿ ಆರಾಧನಾರ್ಹನು ಅಲ್ಲಾಹನಷ್ಟೇ ಎಂದು ವಿಶ್ವಾಸವಿಟ್ಟುಕೊಂಡಿದ್ದರೂ ಗತ ಪ್ರವಾದಿಗಳಾದ ನೂಹ್(ಅ), ಇಬ್ರಾಹೀಮ್(ಅ), ಹೂದ್(ಅ), ಸ್ವಾಲಿಹ್(ಅ), ಇಸ್ಮಾಯಿಲ್(ಅ) ಇಸ್ಹಾಖ್(ಅ), ಯಅಕೂಬ್(ಅ) ಅಥವಾ ಮುಹಮ್ಮದ್(ಸ)ರವರಿಗಿಂತ ಮುಂಚೆ ನಿಯೋಜಿತರಾಗಿದ್ದ ಯಾವುದೇ ಪ್ರವಾದಿಗಳಲ್ಲಿ ಓರ್ವರನ್ನು ನಿರಾಕರಿಸಿದರೂ ಅವನು ಅಲ್ಲಾಹನನ್ನು ನಿಷೇಧಿಸಿದವರಲ್ಲಿ ಸೇರಿಕೊಳ್ಳುವನು. ಯಾವ ತನಕ ಆರಾಧನಾರ್ಹನು ಅಲ್ಲಾಹು ಮಾತ್ರವೆಂದು ವಿಶ್ವಾಸವಿಡುವುದರೊಂದಿಗೆ ಸರ್ವ ಪ್ರವಾದಿಗಳ ಪ್ರವಾದಿತ್ವವನ್ನು ದೃಢೀಕರಿಸುವುದಿಲ್ಲವೊ ಅಂದಿನ ತನಕ ಅವನು ಸತ್ಯ ನಿಷೇಧಿಯಾಗಿಯೇ ಇರುತ್ತಾನೆ.

### ಪ್ರವಾದಿಗಳ ಕಾಲ ಘಟ್ಟದಲ್ಲಿ ಇಸ್ಲಾಮ್ :

ಆದಮ್(ಅ)ರವರ ಕಾಲದಲ್ಲಿ ಅಲ್ಲಾಹನನ್ನು ಮಾತ್ರ ಆರಾಧಿಸುವುದು ಮತ್ತು ಆದಮ್(ಅ)ರವರು ತಂದ ಶರೀಅತ್ ಅನುಸರಿಸಿ ಜೀವಿಸುವುದು ಇಸ್ಲಾಮ್ ಆಗಿತ್ತು. ಅದೇ ಪ್ರಕಾರ ನೂಹ್(ಅ)ರವರ ಕಾಲದಲ್ಲಿ ಅಲ್ಲಾಹನನ್ನು ಮಾತ್ರ ಆರಾಧಿಸುವುದು ಮತ್ತು ನೂಹ್(ಅ) ತಂದ ಶರೀಅತ್ ಅನುಸರಿಸಿ ಬಾಳುವುದು ಇಸ್ಲಾಮ್ ಆಗಿತ್ತು. ಹೂದ್(ಅ)ಸ್ವಾಲಿಹ್(ಅ) ಮುಹಮ್ಮದ್(ಸ)ರವರ ನಿಯುಕ್ತಿಯ ತನಕ ಪ್ರವಾದಿಗಳ ಶೃಂಖಲೆಯಲ್ಲಿ ಒಳಪಡುವ ಸರ್ವ ಪ್ರವಾದಿಗಳ ಕಾಲಘಟ್ಟದಲ್ಲಿ ಇಸ್ಲಾಮ್ ಅದೇ ಆಗಿತ್ತು.

**ಮುಹಮ್ಮದ್(ಸ)ರವರ ಕಾಲಘಟ್ಟದಲ್ಲಿ ಇಸ್ಲಾಮ್ :**

ಅಂತ್ಯ ಪ್ರವಾದಿ ಮುಹಮ್ಮದ್(ಸ)ರವರ ಕಾಲದಲ್ಲಿ ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ವಿಶ್ವಾಸವಿಡುವುದು, ಪ್ರವಾದಿವರ್ಯರ(ಸ) ಎಲ್ಲಾ ಮಾತಿನಲ್ಲಿ ಪರಿಪೂರ್ಣ ವಿಶ್ವಾಸವಿಟ್ಟು ಅವರು ತಂದ ಶರೀಅತ್‌ನ್ನು ಅನುಸರಿಸಿ ಜೀವಿಸುವುದು ಇಸ್ಲಾಮ್ ಆಗಿತ್ತು. ಯಹೂದಿ-ನಸಾರಾಗಳು ಮುಹಮ್ಮದ್(ಸ)ರವರ ಪ್ರವಾದಿತ್ವವನ್ನು ನಿರಾಕರಿಸಿದ ಕಾರಣಕ್ಕೆ ಅವರು ಕಾಫಿರ್ (ಸತ್ಯ ನಿಷೇಧಿ)ಗಳೆಂದೂ ಪಥಭ್ರಷ್ಟರೆಂದೂ ಪರಿಗಣಿತರಾದರು. ಅವರಲ್ಲಿ ಕೆಲವರು ಅಲ್ಲಾಹನು ಏಕನೆಂದೂ ಆರಾಧನೆಯು ಕೇವಲ ಅವನಿಗೆ ಸೀಮಿತವಾದ ಹಕ್ಕೆಂದು ತಿಳಿಯುತ್ತಿದ್ದವರಿದ್ದರೂ ಮುಸಲ್ಮಾನರ ಒಮ್ಮತಾಭಿಪ್ರಾಯದಂತೆ ಪ್ರವಾದಿಗಳನ್ನು ನಿರಾಕರಿಸುವ ಕಾರಣಕ್ಕೆ ಅವರು ಸತ್ಯನಿಷೇಧಿಗಳೆ(ಕಾಫಿರ್) ಆಗಿದ್ದರು.

**ಶರೀಅತ್‌ನ ಯಾವುದಾದರೂ ಒಂದು ಆದೇಶವನ್ನು ನಿರಾಕರಿಸುವುದೂ ಕುಫ್ರು ಆಗಿದೆ :**

ಒಬ್ಬ ವ್ಯಕ್ತಿಯು `ನಾನು ಅಲ್ಲಾಹನನ್ನು ಮಾತ್ರ ಆರಾಧಿಸುತ್ತೇನೆಂದೂ ಮುಹಮ್ಮದ್(ಸ)ರವರ ಪ್ರವಾದಿತ್ವದಲ್ಲಿ ವಿಶ್ವಾಸವಿಟ್ಟು ಅವರು ಹೇಳುವ ಎಲ್ಲಾ ಮಾತುಗಳನ್ನು ಪಾಲಿಸುತ್ತೇನೆ ಆದರೆ, `ಝಿನಾ'(ವ್ಯಬಿಚಾರಿ)ವನ್ನು ಬಿಟ್ಟು ಎಂದು ಹೇಳುತ್ತಾನೆಂದಿಟ್ಟುಕೊಳ್ಳಿ. ಅವನು ಆ ರೀತಿಯಲ್ಲಿ ವ್ಯಬಿಚಾರವನ್ನು ಅವನ ಮಟ್ಟಿಗೆ ಹಲಾಲ್‌ಗೊಳಿಸಿಕೊಂಡನೆಂದರೆ ಈ ಕಾರಣಕ್ಕೆ ಅವನು ಸತ್ಯ ನಿಷೇಧಿಗಳಲ್ಲಿ (ಕಾಫಿರ್) ಸೇರಿಕೊಳ್ಳುವನು. ಅವನ ರಕ್ತ ಮತ್ತು ಸಂಪತ್ತು ಸತ್ಯವಿಶ್ವಾಸಿಗಳಿಗೆ ಹಲಾಲ್ ಎನಿಸುವುದು ಎಂಬ ಕುರಿತು ಸರ್ವಮುಸಲ್ಮಾನರಿಗೂ ಒಮ್ಮತಾಬಿಪ್ರಾಯವಿದೆ.

ಅದೇ ಪ್ರಕಾರ ಒಬ್ಬ 'ನಾನು ಅಲ್ಲಾಹನು ಏಕನೆಂದು ನಂಬಿ ಅವನನ್ನು ಮಾತ್ರ ಆರಾಧಿಸುತ್ತೇನೆ. ಪ್ರವಾದಿಗಳಲ್ಲೆಲ್ಲಾ ವಿಶ್ವಾಸವಿರಿಸಿಕೊಂಡು ಮುಹಮ್ಮದ್(ಸ)ರವರ ಶರೀಅತನ್ನು ಅನುಸರಿಸುತ್ತೇನೆ'' ಎಂದು ಹೇಳುತ್ತಾನಾದರೂ ಸಲಿಂಗರತಿಯಲ್ಲಿ ತೊಡಗಿ ದೈಹಿಕ ತೀಟೆ ತೀರಿಸಿಕೊಳ್ಳುವುದನ್ನು ನಿಷಿದ್ಧವೆನ್ನುವ ನಿಯಮವನ್ನು ಉಲ್ಲಂಘಿಸುತ್ತಾನೆಂದಾದರೆ ಅವನು ಸತ್ಯ ನಿಷೇಧಿಗಳಲ್ಲಿ ಸೇರಿಕೊಳ್ಳುವನು. ಆ ಕಾರಣದಿಂದ ಅವನ ಪ್ರಾಣ ಮತ್ತು ಸಂಪತ್ತು ಹಲಾಲ್ ಎಣಿಸುವುದು.

**ಸತ್ಯವನ್ನು ಅರಿತು ನಿಷೇಧಿಸುವವನೇ ಕಾಫಿರ್ :**

ಒಬ್ಬನಿಗೆ ಒಂದು ವಿಷಯದ ಕುರಿತು ಮಾಹಿತಿಯೇ ಇಲ್ಲವೆಂದು ಮೇಲೆ ಅವನು ಅದನ್ನು ಅಂಗೀಕರಿಸುವುದೊ-ನಿಷೇಧಿಸುವುದೋ ಹೇಗೆ? ಮೊದಲು ಅವನಿಗೆ ಈ ಕುರಿತು ಮಾಹಿತಿ ನೀಡಿ ಆಧಾರ-ಪ್ರಮಾಣಗಳ ಸಹಿತ ಅವನಿಗೆ ಮನವರಿಕೆ ಮಾಡಬೇಕು. ಅದನ್ನು ಅವನ ಮುಂದೆ ದೃಡೀಕರಿಸಲಾದ ನಂತರವೂ ಅವನು ನಿರಾಕರಿಸಿದರೆ ಅವನು ಸತ್ಯನಿಷೇಧಿ(ಕಾಫಿರ್ ) ಎಂದೆಣಿಸುವನು. ಆಗ ಮಾತ್ರ ಅವನ ರಕ್ತ ಮತ್ತು ಸಂಪತ್ತು ಅನುವದನೀಯವೆನಿಸುತ್ತದೆ. ಈ ಕುರಿತು ಮುಸ್ಲಿಮರಲ್ಲಿ ಸಹಮತವಿದೆ. ಹೀಗಾದಾಗ ಅವನಿಗೆ ಅವನ ತೌಹೀದ್‌ನಿಂದಲೊ ಅವನ ವಿಶ್ವಾಸದಿಂದಲೊ ಯಾವುದೇ ಪ್ರಯೋಜನ ಲಭಿಸದು. ಏಕೆಂದರೆ ಅವನು ಪ್ರವಾದಿ(ಸ)ರವರ ವಚನವನ್ನು ಧಿಕ್ಕರಿಸುತ್ತಾನೆ. ಆ ಮೂಲಕ ಅವನು ಅಲ್ಲಾಹನನ್ನು ಧಿಕ್ಕರಿಸಿದ್ದಾನೆ.

**ಪ್ರವಾದಿ(ಸ)ರಿಗೆ ಅಪಚಾರ ಮಾಡುವುದು ಅಥವಾ ಅವರ ಸ್ಥಾನಮಾನಕ್ಕೆ ಕುಂದುಂಟು ಮಾಡುವುದು ಕುಫ್ರ್ ಆಗಿದೆ :**

ಅಲ್ಲಾಹನನ್ನು ಆರಾಧ್ಯನೆಂದೂ, ಮುಹಮ್ಮದ್(ಸ)ರವರನ್ನು ಅಲ್ಲಾಹನ ಸಂದೇಶವಾಹಕರೆಂದೂ ಅರಿತು ವಿಶ್ವಾಸವಿರಿಸಿಕೊಂಡವನಾಗಿದ್ದರೂ ಯಾವುದೊ ವಿಷಯದಲ್ಲಿ ಪ್ರವಾದಿ(ಸ)ರವರ ಕುರಿತು ಅಪಹಾಸ್ಯ ಮಾಡಿದರೆ, ಅಥವಾ ಪ್ರವಾದಿಗಳನ್ನು ಅವರ ಸ್ಥಾನ-ಮಾನಕ್ಕೆ ಅನುಗುಣವಾಗಿ ಪರಿಗಣಿಸದೇ ಇದ್ದರೆ ಅವನು ಸತ್ಯ ನಿಷೇಧಿ(ಕಾಫಿರ್) ಎಣಿಸಿಕೊಳ್ಳುತ್ತಾನೆ.

ಈ ಕುರಿತು ಅಲ್ಲಾಹನು ಹೇಳುತ್ತಾನೆ,

قُلْ اَبِاللّٰهِ وَآيَاتِهِ وَرَسُوْلِهِ كُنْتُمْ تَسْتَهْزِؤُنَ، لاَ تَعْتَذِرُوْا قَدْ كَفَرْتُمْ بَعْدَ اِيْمَانِكُمْ (سورة التوبة، الآيتان ٦٥،٦٦)

**"ಅವರೊಡನೆ ಹೇಳಿರಿ, ನಿಮ್ಮ ಹಾಸ್ಯ ವಿನೋದಗಳು ಅಲ್ಲಾಹ್, ಅವನ ವಚನಗಳು ಮತ್ತು ಅವನ ರಸೂಲರೊಂದಿಗೇ ಆಗಿತ್ತೇ? ಈಗ ನೆವನಗಳನ್ನೊಡ್ಡದಿರಿ. ನೀವು ವಿಶ್ವಾಸವಿಟ್ಟ ಬಳಿಕ ನಿಷೇಧಿಸಿರುತ್ತೀರಿ' (9-65,66)**

**ತೌಹೀದ್‌ಗೆ ವಿರುದ್ಧವಾದುದು ಶಿರ್ಕ್ ಆಗಿದೆ :**

ತೌಹೀದ್‌ಗೆ ಎದುರಾಗಿ ಬರುವ ಎಲ್ಲಾ ಸಂಗತಿಗಳೂ ಶಿರ್ಕ್ ಆಗಿದೆ. ಶಿರ್ಕ್ ಅಂದರೆ ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುವುದಾಗಿದೆ. ನಿಶ್ಚಯವಾಗಿಯೂ ಎಲ್ಲಾ ಪದಗಳಿಗೂ ಒಂದು ವಿರುದ್ಧಪದವಿರುತ್ತದೆ. ಒಂದು ದಿಕ್ಕಿಗೆದುರು ಮತ್ತೊಂದು ದಿಕ್ಕು ಇರುವಂತೆ. ಒಂದು ವಿಷಯವನ್ನು ಕೂಲಂಕುಶವಾಗಿ ಅಧ್ಯಯನ ಮಾಡಿದಾಗ ಅದಕ್ಕೆ ವಿರುದ್ಧವಿರುವ ವಿಷಯದ ಕುರಿತೂ ಸಾಕಷ್ಟು ಮಾಹಿತಿ ಲಭ್ಯವಾಗುತ್ತದೆ. ಈ ಕುರಿತು ಕವಿಯೊಬ್ಬರು ಹೀಗೆ ಹೇಳುತ್ತಾರೆ

وَالضِّدُّ يُظْهِرُ حُسْنَهُ الضِّدُّ    وَبِضِدِّهَا تَتَمَيَّزُ الْاَشْيَاءُ

**"ಒಬ್ಬ ವಿರೋಧಿಯೇ ಅವನ ವಿರೋಧಿಯ ಶ್ರೇಯಸ್ಸು ಬಹಿರಂಗಪಡಿಸುತ್ತಾನೆ. ವಿರೋಧದಿಂದಲೇ ವಿಷಯದ ಯಾತಾರ್ಥ್ಯ ಹೊರ ಹೊಮ್ಮುತ್ತದೆ"**

**ಶಿರ್ಕ್ ಮಹಾಪಾಪವಾಗಿದೆ ಏಕೆ?**

ಅಲ್ಲಾಹು ಕಳುಹಿಸಿದ ಪ್ರವಾದಿಗಳು ಈ ಲೋಕದಲ್ಲಿ ಪ್ರಚುರಪಡಿಸಿದ ತೌಹೀದ್‌ಗೆ ವಿರುದ್ಧವಾದುದಾಗಿದೆ ಅಲ್ಲಾಹನಿಗೆ ಸಹಭಾಗಿಗಳನ್ನು ನಿಶ್ಚಯಿಸುವುದು.

ಅಲ್ಲಾಹನಿಗೆ ಬಾಗೀದಾರರನ್ನು ನಿಶ್ಚಯಿಸುವಂತಹಾ ಶಿರ್ಕ್‌ನಲ್ಲಿ ಏರ್ಪಡುವವರು ಮುಶ್ರಿಕ್‌ಗಳಾಗಿದ್ದಾರೆ. ಏಕೆಂದರೆ ಅಲ್ಲಾಹನಿಗಷ್ಟೇ ಲಭಿಸಬೇಕಾದ ಆರಾಧನಾ ಕರ್ಮದಲ್ಲಿ ಅವರು

ಇತರರನ್ನೂ ಶಾಮೀಲುಗೊಳಿಸುತ್ತಾರೆ. ಸೃಷ್ಠಿ ಮತ್ತು ವ್ಯವಸ್ಥಾಪನೆಯ ಕಾರ್ಯದಲ್ಲಿ ಅಲ್ಲಾಹನಿಗೆ ಹೊರತಾದ ಅನ್ಯ ಶಕ್ತಿಯನ್ನು ಅವರು ಕಲ್ಪಿಸಿಕೊಳ್ಳುತ್ತಾರೆ ಅಥವಾ ಅಲ್ಲಾಹನು ತಿಳಿಸಿಕೊಟ್ಟ ವಿಷಯಗಳನ್ನು ಅವಗಣಿಸಿ ಅದಕ್ಕೆ ವಿರುದ್ದವಾದ ಪ್ರವೃತ್ತಿಯನ್ನು ಏರ್ಪಡುತ್ತಾರೆ. ಅಲ್ಲಾಹನ ಶರೀಅತ್‌ಗೆ ವ್ಯತಿರಿಕ್ತವಾದ ರೀತಿಯಲ್ಲಿ ಅವರು ವರ್ತಿಸುತ್ತಾರೆ.

ಆದ್ದರಿಂದ ಇಂತಹಾ ಜನರು ಅವರ ಕರ್ಮಗಳ ಕಾರಣದಿಂದ ಅಲ್ಲಾಹನಿಗೆ ಶಿರ್ಕ್ ಮಾಡುವವರಲ್ಲಿ ಸೇರಿ ಕೊಳ್ಳುತ್ತಾರೆ.

**لااله الاالله** ಎಂಬ ಪದ **:** ಸರ್ವಶಕ್ತನಾದ ಅಲ್ಲಾಹನ ತೌಹೀದ್ **لااله الاالله** ಎಂಬ ಪದವೇ ಆಗಿದೆ. ಅಂದರೆ ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲವೆಂದು ಸಾಕ್ಷ್ಯವಹಿಸುವುದಾಗಿದೆ. ಈ ಪದವು ಅಲ್ಲಾಹೇತರ ಆರಾಧ್ಯರನ್ನೆಲ್ಲಾ ನಿರಾಕರಿಸಿ ಬಿಡುತ್ತದೆ. ಮಾತ್ರವಲ್ಲದೆ ಎಲ್ಲಾ ರೀತಿಯ ಆರಾಧನಾ ಕರ್ಮಗಳೂ ಕೇವಲ ಅಲ್ಲಾಹನಿಗೆಂದು ಸಾಬೀತು ಪಡಿಸುತ್ತದೆ.

ಪರಿಶುದ್ಧನಾದ ಅಲ್ಲಾಹನು ಹೇಳುತ್ತಾನೆ,

**ذٰلِکَ بِاَنَّ اللّٰهَ هُوَالْحَقُّ وَاَنَّ مَايَدْعُوْنَ مِنْ دُوْنِهِ الْبَاطِلُ** (سورة لقمان،الآية ٣٠)

**"ಇದಕ್ಕೆಲ್ಲಾ ಕಾರಣವೇನೆಂದರೆ ಅಲ್ಲಾಹನೇ ಸತ್ಯವಾಗಿದ್ದಾನೆ ಮತ್ತು ಅವನನ್ನು ಬಿಟ್ಟು ಇವರು ಪ್ರಾರ್ಥಿಸುತ್ತಿರುವ ಇತರ ಎಲ್ಲವೂ ಮಿಥ್ಯವಾಗಿದೆ"**(31-30)

ಮತ್ತೊಂದೆಡೆ ಅಲ್ಲಾಹು ಹೇಳುತ್ತಾನೆ,

**فَاعْلَمْ اَنَّهُ لَااِلٰهَ اِلَّا اللّٰهُ (سورة محمد،الآية١٩)**

**"(ಆದುದರಿಂದ ಸಂದೇಶವಾಹಕರೇ) ಅಲ್ಲಾಹನ ಹೊರತು ಇತರ ಆರಾಧ್ಯನಾರೂ ಇಲ್ಲವೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ"(47-19)**

ಇನ್ನೊಂದು ಕಡೆ ಅಲ್ಲಾಹು ಹೀಗೆ ಹೇಳುತ್ತಾನೆ,

**شَهِدَاللّٰهُ اَنَّهُ لاَ اِلٰهَ اِلَّاهُوَ وَالْمَلاَئِكَةُ وَاُولُوالْعِلْمِ قَائِماً بِالْقِسْطِ**
**لاَ اِلٰهَ اِلَّاهُوَالْعَزِيْزُالْحَكِيْمُ** (سورة ال عمران، الآية ١٨)

**"ಅಲ್ಲಾಹನು ತನ್ನ ಹೊರತು ಇತರ ಆರಾಧ್ಯರಿಲ್ಲವೆಂದು ಸ್ವತಃ ಸಾಕ್ಷ್ಯ ನುಡಿಯುತ್ತಾನೆ ಮತ್ತು ದೇವಚರರೂ ಎಲ್ಲಾ ಜ್ಞಾನವಂತರೂ ಆ ಪ್ರಬಲ ಯುಕ್ತಿಪೂರ್ಣನ ಹೊರತು ವಾಸ್ತವದಲ್ಲಿ ಅನ್ಯ ಆರಾಧ್ಯನಿಲ್ಲವೆಂದು ಸತ್ಯ ಮತ್ತು ನ್ಯಾಯದೊಂದಿಗೆ ಸಾಕ್ಷಿ ನುಡಿಯುತ್ತಾರೆ"**(3-18)

ಅಲ್ಲಾಹು ಹೇಳುತ್ತಾನೆ,

وَقَالَ اللّٰهُ لاَ تَتَّخِذُوٓا اِلٰهَيْنِ اثْنَيْنِ اِنَّمَا هُوَ اِلٰهٌ وَّاحِدٌ (سورة النحل،الآية ٥١)

"ಇಬ್ಬರು ಆರಾಧ್ಯರನ್ನು ಮಾಡಿಕೊಳ್ಳಬೇಡಿರಿ. ಆರಾಧ್ಯನಂತೂ ಒಬ್ಬನೇ"(16-51)

**ಅಲ್ಲಾಹೇತರರಿಗೆ ಮಾಡುವ ಇಬಾದತ್ ವ್ಯರ್ಥ :**

ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನಿಗೆ ಮೀಸಲಾಗಿರಿಸುವುದು ತೌಹೀದ್ ಆಗಿದೆ. ಆದರೆ ಅದು ಅಲ್ಲಾಹನ ಮೇಲೆ ಪರಿಪೂರ್ಣ ವಿಶ್ವಾಸದಿಂದಾಗಿರಬೇಕು. ಯಾರನ್ನು ಸತ್ಯವೆಂದು ಅಂಗೀಕರಿಸಲಾಗುತ್ತದೊ ಅವನ ನಿರ್ದೇಶನಕ್ಕೆ ಅನುಸಾರವಾಗಿ ಪ್ರವರ್ತಿಸಬೇಕು. ಕೇವಲ ಬಾಯಿ ಮಾತಿನಲ್ಲಿ ವಿಶ್ವಾಸ ಪ್ರಕಟಿಸುವುದರಿಂದ ಯಾವ ಪ್ರಯೋಜನವು ಲಭಿಸದು.

ಅಲ್ಲಾಹೇತರರ ಆರಾಧನೆ ವ್ಯರ್ಥ ಮತ್ತು ನಿಷ್ಪ್ರಯೋಜಕವೆನ್ನುವ ಪ್ರಜ್ಞೆಯಿಂದ ಆರಾಧನೆಗೆ ಅರ್ಹನಾದ ಅಲ್ಲಾಹನನ್ನುಆರಾಧಿಸಬೇಕು. ಅಲ್ಲಾಹೇತರರಿಗೆ ಆರಾಧನೆ ಮಾಡುವವರು ಮುಶ್ರಿಕರಾಗಿದ್ದಾರೆ. ಇಂತಹಾ ಮುಶ್ರಿಕೀನರೊಂದಿಗೆ ಮುವಹ್ಹಿದ್‌ಗಳಿಗೆ(ತೌಹೀದ್‌ನ ಜನರಿಗೆ) ಯಾವುದೇ ಸಂಬಂಧವಿರುವುದಿಲ್ಲ.

ಈ ಕುರಿತು ಅಲ್ಲಾಹನ ವಚನ ಹೀಗಿದೆ.

قَدْ كَانَتْ لَكُمْ اُسْوَةٌ حَسَنَةٌ فِىٓ اِبْرَاهِيْمَ وَالَّذِيْنَ مَعَهُ، اِذْقَالُوْا لِقَوْمِهِمْ اِنَّابُرَءٰٓؤُا مِنْكُمْ وَمِمَّاتَعْبُدُوْنَ مِنْ دُوْنِ اللّٰهِ كَفَرْنَا بِكُمْ وَبَدَابَيْنَنَاوَبَيْنَكُمُ الْعَدَاوَةُ وَالْبَغْضَآءُ اَبَداً حَتّٰى تُؤْمِنُوْا بِاللّٰهِ وَحْدَهُ (سورة الممتحنة،الآية٤)

ನಿಮಗೆ ಇಬ್ರಾಹೀಮ್ ಮತ್ತು ಅವರ ಸಂಗಾತಿಗಳಲ್ಲಿ ಒಂದು ಉತ್ತಮ ಆದರ್ಶವಿದೆ. ಅವರು ತಮ್ಮ ಜನಾಂಗದೊಂದಿಗೆ" ನಾವು ನಿಮ್ಮಿಂದ ಹಾಗೂ ನೀವು ಅಲ್ಲಾಹನನ್ನು ಬಿಟ್ಟು ಪೂಜಿಸುತ್ತಿರುವ ಈ ಆರಾಧ್ಯ ವಸ್ತುಗಳಿಂದ ಸಂಪೂರ್ಣ ಅಸಂತುಷ್ಟರಾಗಿದ್ದೇವೆ. ನಾವು ನಿಮ್ಮನ್ನು ಧಿಕ್ಕರಿಸಿದೆವು. ನೀವು ಏಕೈಕನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುವವರೆಗೆ ನಮ್ಮ ನಿಮ್ಮೊಳಗೆ ಶಾಶ್ವತವಾಗಿ ದ್ವೇಷ ಮತ್ತು ವೈರತ್ವ ಉಂಟಾಯಿತು" ಎಂದು ಸ್ಪಷ್ಟವಾಗಿ ಹೇಳಿ ಬಿಟ್ಟರು (60-4)

ಅಲ್ಲಾಹು ಮುಂದುವರಿಸುತ್ತಾ ಹೇಳುತ್ತಾನೆ,

وَاِذْقَالَ اِبْرَاهِيْمُ لِاَبِيْهِ وَقَوْمِهٖ اِنَّنِىْ بَرَآءٌ مِّمَّا تَعْبُدُوْنَ اِلَّاالَّذِىْ فَطَرَنِىْ فَاِنَّهٗ سَيَهْدِيْنِ(سورة الزخرف، الآيتان ٢٦،٢٧)

**“ಇಬ್ರಾಹೀಮರು ತನ್ನ ತಂದೆಯೊಂದಿಗೆ ಹಾಗೂ ತಮ್ಮ ಜನಾಂಗದೊಡನೆ, ಹೇಳಿದ್ದ ಸಂದರ್ಭವನ್ನು ಸ್ಮರಿಸಿರಿ. ನೀವು ಯಾರ ಆರಾಧನೆ ಮಾಡುತ್ತೀರೋ ಅವರೊಂದಿಗೆ ನನಗೆ ಯಾವ ಸಂದರ್ಭವೂ ಇಲ್ಲ. ನನಗೆ ಸಂಬಂಧವಿರುವುದು ನನ್ನನ್ನು ಸೃಷ್ಟಿಸಿದವನೊಂದಿಗೆ ಮತ್ತು ಅವನೇ ನನಗೆ ಮಾರ್ಗದರ್ಶನ ಮಾಡುವನು''**(43-26,27)

ಈ ರೀತಿ ಇಬ್ರಾಹೀಮ್(ಅ)ರವರು ಅಲ್ಲಾಹೇತರರನ್ನು ಆರಾಧಿಸುವ ಸಮುದಾಯದ ಮುಂದೆ ಅಲ್ಲಾಹನನ್ನು ಮಾತ್ರ ಆರಾಧಿಸುವ ತನ್ನ ಔನ್ನತ್ಯವನ್ನು ಸಾರಿ ಹೇಳಿದರು. ಮಾತ್ರವಲ್ಲದೆ ತನ್ನ ಆರಾಧ್ಯನು ಸತ್ಯವೆಂದೂ ಅವನ ಹೊರತು ಆರಾಧ್ಯರೇ ಇಲ್ಲವೆಂದೂ ಪ್ರತಿಪಾದಿಸಿದರು.

ಈ ವಚನವು ಅಲ್ಲಾಹನನ್ನು ಮಾತ್ರ ಆರಾಧ್ಯನೆಂದು ಸಾರುತ್ತದೆ. ಸರ್ವ ಆರಾಧನಾ ಕರ್ಮಗಳೂ ಕೇವಲ ಅವನಿಗೆ ಮೀಸಲೆಂದು ಘೋಷಿಸುತ್ತದೆ. ಅವನ ಹೊರತು ಅನ್ಯರ ಆರಾಧನೆಯು ವ್ಯರ್ಥವೆಂದೂ, ಮಿಥ್ಯ ಶಕ್ತಿಗಳನ್ನು ಆರಾಧಿಸುವವರಿಗಿಂತ ಸತ್ಯಪಥದಲ್ಲಿ ನೆಲೆನಿಂತು ನೈಜ ಪ್ರಭುವಾದ ಅಲ್ಲಾಹನನ್ನು ಆರಾಧಿಸುವರು ಶ್ರೇಷ್ಟರೆಂದೂ ಬಹಿರಂಗಪಡಿಸುತ್ತದೆ. ಶಿರ್ಕ್ ವ್ಯರ್ಥ ಪ್ರವರ್ತನೆಯಾಗಿದೆ ಎನ್ನುವುದನ್ನು ಮನಗಾಣುವುದು ಮುಖ್ಯವಾಗಿದೆ.

## ಅಲ್ಲಾಹನ ಶರೀಅತನ್ನು ಅವಲಂಬಿಸುವುದು ತೌಹೀದ್‌ನ ಹಕ್ಕಾಗಿದೆ

ಸರ್ವ ಮನುಷ್ಯರು ಮತ್ತು ಜಿನ್ನಾತ್‌ಗಳು ತಮ್ಮ ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನಿಗೆ ಮೀಸಲಾಗಿರಿಸಬೇಕೆನ್ನುವುದು ಕಡ್ಡಾಯವಾಗಿದೆ. ಇದು ತೌಹೀದ್‌ನ ಹಕ್ಕು ಕೂಡಾ ಆಗಿದೆ. ಅಲ್ಲಾಹನ ಶರೀಅತ್‌ಗೆ ಬದ್ಧತೆ ಪ್ರಕಟಿಸುವುದು ಅನಿವಾರ್ಯವೇಕೆಂದರೆ ಪರಿಶುದ್ಧನಾದ ಅಲ್ಲಾಹನೇ ಧಾರ್ಮಿಕ ವಿಧಿ ನಿರ್ಮಿಸುವ ಅಧಿಕಾರ ಹೊಂದಿರುತ್ತಾನೆ. ಅಲ್ಲಾಹನ ಮೇಲೆ ವಿಶ್ವಾಸ ಮತ್ತು ಅವನ ವಿಧಿ-ನಿರ್ದೇಶನಗಳಿಗೆ ಬದ್ಧವಾಗಿರುವುದು ತೌಹೀದ್‌ನ ಒಂದು ಬೇಡಿಕೆಯಾಗಿದೆ. ವಾಸ್ತವದಲ್ಲಿ ಅಲ್ಲಾಹನೇ ಈಲೋಕದಲ್ಲಿ ಶರೀಅತನ್ನು ನಿರ್ಮಿಸಿದವನೂ ಪರಲೋಕದಲ್ಲಿ ಪರಮಾಧಿಕಾರ ಹೊಂದಿದವನೂ ಆಗಿರುತ್ತಾನೆ.

ಅಲ್ಲಾಹು ಹೇಳುತ್ತಾನೆ,

''اِنِ الْحُكْمُ اِلَّا لِلّٰهِ'' (سورة الانعام،الآية ٥٧)

**“ತೀರ್ಮಾಣದ ಸಂಪೂರ್ಣ ಅಧಿಕಾರ ಅಲ್ಲಾಹನಿಗಿದೆ''**(6-57)

ಅಲ್ಲಾಹು ಹೇಳುತ್ತಾನೆ,

''فَالْحُكْمُ لِلّٰهِ الْعَلِيِّ الْكَبِيْرِ (سورة غافر،الآية ١٢)

**“ತೀರ್ಮಾಣದ ಸಂಪೂರ್ಣ ಅಧಿಕಾರವು ಮಹಾನನೂ ಮಹೋನ್ನತನೂ ಆದ ಅಲ್ಲಾಹನಿಗಾಗಿದೆ''**

ಅಲ್ಲಾಹು ಹೇಳುತ್ತಾನೆ,

وَمَا اخْتَلَفْتُمْ فِيهِ مِنْ شَيْءٍ فَحُكْمُهُ إِلَى اللَّهِ (سورة الشورى الآية ١٠)

**"ನಿಮ್ಮೊಳಗೆ ಯಾವ ವಿಷಯದಲ್ಲೇ ಮತ ಭೇದವುಂಟಾದರೂ ಅದರ ತೀರ್ಮಾಣ ಮಾಡುವುದು ಅಲ್ಲಾಹನ ಕೆಲಸ"(42-10)**

**ತೌಹೀದನ್ನೇ ಕೆಡಿಸಿ ಬಿಡುವ ಪ್ರವರ್ತನೆ :**

ಆರಾಧನೆಯಲ್ಲಿ ದೇವೇತರಿಗೆ ಸ್ಥಾನ ಕಲ್ಪಿಸುವುದರಿಂದ, ಅಂದರೆ ಅವುಲಿಯಾ, ಅಂಬಿಯಾ, ಸೂರ್ಯ, ಚಂದ್ರ, ನಕ್ಷತ್ರಾದಿಗಳು, ಮಲಾಇಕ್, ಮೂರ್ತಿಗಳು, ಕಲ್ಲು, ಮರ, ಮತ್ತಿತರ ವಸ್ತುಗಳಿಗೆ ಆರಾಧನಾ ಕರ್ಮದಲ್ಲಿ ಸ್ಥಾನ ಕಲ್ಪಿಸುವುದರಿಂದ ಅಲ್ಲಾಹನ ಏಕತ್ವದ(ತೌಹೀದ್) ಕುರಿತಾದ ಪರಿಕಲ್ಪನೆಯೇ ನಾಶವಾಗಿ ಬಿಡುತ್ತದೆ. ಇದರಿಂದ ಸರ್ವ ಆರಾಧನಾ ಕರ್ಮಗಳೂ ವ್ಯರ್ಥವಾಗಿ ಬಿಡುತ್ತದೆ.

**ಪ್ರವಾದಿಗಳೆಲ್ಲರ ಸಂದೇಶವು 'ತೌಹೀದ್' ಆಗಿತ್ತು :**

ಪ್ರವಾದಿ ಮುಹಮ್ಮದ್(ಸ)ರವರನ್ನು ಮತ್ತು ಅವರಿಗಿಂತ ಹಿಂದಿನ ಎಲ್ಲಾ ಪ್ರವಾದಿಗಳನ್ನು ಅಲ್ಲಾಹನೇ ಅವರ ಸಮುದಾಯದ ಕಡೆಗೆ ಪ್ರವಾದಿತ್ವದೊಂದಿಗೆ ಕಳುಹಿಸಿದ್ದನೆನ್ನುವುದನ್ನು ನಾವು ಮನವರಿಕೆ ಮಾಡಿಕೊಂಡೆವು. ಆ ಪೈಕಿ ಕೆಲವು ಸಮೂಹಗಳು ಅವರ ಪ್ರವಾದಿಗಳನ್ನೇ ಆರಾಧಿಸತೊಡಗಿದವು. ಕೆಲವರು ಮರಗಳನ್ನೂ, ಕೆಲವರು ಕಲ್ಲಗಳನ್ನೂ ಆರಾಧಿಸುತ್ತಿದ್ದರು. ಕೆಲವರು ಕೆತ್ತಲ್ಪಟ್ಟ ಮೂರ್ತಿಗಳನ್ನು ಆರಾಧಿಸುತ್ತಿದ್ದರೆ, ಕೆಲವರು ನಕ್ಷತ್ರಗಳನ್ನೂ ಇನ್ನಿತರ ವಸ್ತುಗಳನ್ನೂ ಆರಾಧಿಸುತ್ತಿದ್ದರು. ಈ ಎಲ್ಲಾ ಸಮೂಹಗಳ ಕಡೆಗೆ ನಿಯುಕ್ತಿ ಮಾಡಲಾದ ಸರ್ವ ಪ್ರವಾದಿಗಳೂ ಆ ಸಮೂಹಗಳನ್ನು ಏಕ ದೇವರಾಧನೆಯ ಕಡೆಗೆ ಆಮಂತ್ರಿಸಿದರು. ಆರಾಧನಾ ಕರ್ಮಗಳನ್ನೆಲ್ಲಾ ಸೃಷ್ಠಿಕರ್ತನಾದ ಅಲ್ಲಾಹನಿಗೆ ಸಮರ್ಪಿಸತಕ್ಕದ್ದೆಂದು ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದರು. ತೌಹೀದ್ ಅಥವಾ ಏಕದೇವ ವಿಶ್ವಾಸವನ್ನು ಅಳವಡಿಸಿಕೊಳ್ಳುವಂತೆ ಕರೆ ನೀಡಿದರು. 'ಲಾಇಲಾಹ ಇಲ್ಲಲ್ಲಾಹ್' ಎಂಬ ವಾಕ್ಯವನ್ನು ಉಚ್ಛರಿಸುವಂತೆ ಭಿನ್ನವಿಸಿಕೊಂಡರು. (ಅಂದರೆ ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ) ಈ ವಾಕ್ಯದೊಂದಿಗೆ ವಿರೋಧ ವ್ಯಕ್ತಪಡಿಸುವ ಸರ್ವ ವಸ್ತುಗಳಿಂದಲೂ, ಸರ್ವ ಜನರಿಂದಲೂ ಸಂಪೂರ್ಣವಾಗಿ ಬೇರ್ಪಡುವಂತೆ ಕಲ್ಪಿಸಲಾಯಿತು. ಆರಾಧನಾ ಕರ್ಮಗಳಲ್ಲಿ ಒಂದಿನಿತು (ಸಣ್ಣ ಪಾಲನ್ನು) ಅಲ್ಲಾಹೇತರರಿಗೆ ಹಂಚುವುದು ಕೂಡಾ ಅಲ್ಲಾಹನ ತೌಹೀದ್‌ಗೆ ಅಪಚಾರವೆಸಗುವುದಕ್ಕೆ ಸಮವೆಂದು ಘೋಷಿಸಲಾಯಿತು. ಈ ಕುರಿತಾದ ಅಲ್ಲಾಹನ ವಚನ ನೋಡಿ.

وَلَقَدْ بَعَثْنَا فِي كُلِّ أُمَّةٍ رَّسُولاً أَنِ اعْبُدُوا اللَّهَ وَاجْتَنِبُوا الطَّاغُوتَ (سورة النحل، الآية ٣٦)

**"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕರನ್ನು ಕಳುಹಿಸಿದೆವು ಮತ್ತು ಅಲ್ಲಾಹನ ಆರಾಧನೆ ಮಾಡಿರಿ ಮತ್ತು ತಾಗೂತ್‌ನ ಆರಾಧನೆಯಿಂದ ದೂರವಿರಿ ಎಂದು ಅವರ ಮುಖಾಂತರ ಎಚ್ಚರಿಕೆ ನೀಡಿದೆವು."**(16-36)

**ಹಾಜಿಗಳು ಮತ್ತು ಇತರರಲ್ಲಿ ಕಂಡು ಬರುವ ಅಂಧ ವಿಶ್ವಾಸಗಳು :**

ಅಲ್ಲಾಹನಿಗೆ ಸಲ್ಲಬೇಕಾದ ಆರಾಧನಾ ಕರ್ಮಗಳಲ್ಲಿ ಕೆಲವನ್ನು ಕಬ್ರ್‌ಗಳಿಗೆ ಸಮರ್ಪಿಸುವ ಸಂಪ್ರದಾಯಗಳು ಇಂದಿಗೂ ಕೆಲವು ಕಡೆ ಕಂಡು ಬರುತ್ತದೆ. ಮಿಸ್ರ್‌ನಲ್ಲಿ ಬದ್‌ವೀ ಮತ್ತು ಹುಸೈನ್‌ರವರ ಕಬ್ರ್‌ಗಳಿಗೆ (ಭಾರತ ಉಪಖಂಡದಲ್ಲಿ ಹಲವಾರು ಕಡೆ) ತವಾಫ್-ಸುಜೂದ್-ಹರಕೆ-ಕಾಣಿಕೆ, ಮೃಗ ಬಲಿ ಮುಂತಾದ ರೀತಿಯ ಆರಾಧನೆ ಅರ್ಪಿಸಲಾಗುತ್ತದೆ.

ಇದೇ ರೀತಿ ಕೆಲವು ತಿಳಿಗೇಡಿ ಹಾಜಿಗಳು ಪ್ರವಾದಿ(ಸ)ರವರ ಕಬ್ರ್‌ನ ಬಳಿ ನಿಂತು ಸಹಾಯ ಯಾಚಿಸುವುದು, ಶತ್ರುಗಳ ವಿರುದ್ಧ ಸಹಾಯ ಮಾಡುವಂತೆ ವಿಲಾಪಿಸುವುದು, ಆಶೆ-ಆಕಾಂಕ್ಷೆಗಳನ್ನು ತೋಡಿಕೊಳ್ಳುವುದು, ದೂರು ನೀಡುವುದು ಇಂತಹಾ ಇನ್ನಿತರ ಪ್ರವೃತ್ತಿಯನ್ನು ಪ್ರಕಟಿಸುವುದು ಮಾಡುತ್ತಿರುತ್ತಾರೆ. ಇದೆಲ್ಲವೂ ಅಲ್ಲಾಹೇತರರ ಆರಾಧನೆಗೆ ಸಮವಾಗುತ್ತದೆ. ಇದು ಇಸ್ಲಾಮಿಗೆ ಮೊದಲಿನ ಕಾಲದ ಮುಶ್ರಿಕರ ಪ್ರವರ್ತನೆಗಳಾಗಿದ್ದು ಇಸ್ಲಾಮ್ ಇದನ್ನು ನಿಷೇಧಿಸುತ್ತದೆ.

**ಸೂಫಿಗಳ ವಿಕೃತ ವಿಶ್ವಾಸ ಮತ್ತು ಪ್ರವೃತ್ತಿ :**

ಕೆಲವು ಸೂಫಿಗಳು ಮುಸ್ಲಿಮರ ವಿಶ್ವಾಸಾಚಾರಕ್ಕೆ ದೊಡ್ಡ ಹಾನಿ ಉಂಟು ಮಾಡಿದ್ದಾರೆ. ಅವರು ಕೆಲವು ಅವುಲಿಯಾಗಳು ಸೃಷ್ಟಿಯ ನಿಯಮಗಳನ್ನು ಬದಲಿಸುತ್ತಾರೆ ಮತ್ತು ಜಗತ್ತಿನ ವ್ಯವಸ್ಥಾಪನೆಯನ್ನು ನೋಡಿಕೊಳ್ಳುತ್ತಾರೆ(ಅಲ್ಲಾಹು ರಕ್ಷಿಸಲಿ) ಎಂಬ ಸುಳ್ಳು ವಿಶ್ವಾಸ ಮತ್ತು ನಂಬಿಕೆಯನ್ನು ಹರಡುತ್ತಾರೆ. ಇದು ಅಲ್ಲಾಹನ ರುಬೂಬಿಯತ್‌ನಲ್ಲಿ ಎಸಲಾಗುವ ದೊಡ್ಡ ಶಿರ್ಕ್ ಆಗಿದೆ.

**ಜನ ಸಾಮಾನ್ಯರಲ್ಲಿರುವ ವಿಶ್ವಾಸ ದೋಷಗಳು :**

ಕೆಲವು ವ್ಯಕ್ತಿಗಳಿಗೆ ಅಲ್ಲಾಹನೊಂದಿಗೆ ನೇರ ಸಂಪರ್ಕವಿದೆ ಎಂಬ ನಂಬಿಕೆಯು ಕೆಲವು ಸಾಮಾನ್ಯ ಜನರಲ್ಲಿ ನೆಲೆ ನಿಂತಿದೆ. ಅಲ್ಲಾಹನ ಸಂಪರ್ಕವಿರುವುದರಿಂದ ಅವರಿಗೆ ಮುಹಮ್ಮದ್(ಸ)ರವರ ಶರೀಅತ್‌ನ ನಿಯಮ ಬಾದಕವಾಗುವುದಿಲ್ಲವೆಂದು ಅವರು ಭಾವಿಸುತ್ತಾರೆ. ಅವರಿಗೆ ಅದೃಶ್ಯ ಸಂಗತಿಗಳು ಗೋಚರಿಸುತ್ತದೆಂದೂ, ಅಗೋಚರ ರೀತಿಯಲ್ಲಿ ಅವರು ವ್ಯವಹರಿಸುತ್ತಾರೆಂದೂ, ಜಗತ್ತಿನ ಸೃಷ್ಟಿಯ ಮೂಲ ನಿಯಮಗಳನ್ನೇ ಅವರು ಬದಲಿಸುತ್ತಾರೆಂದೂ ನಂಬುತ್ತಾರೆ. ಇಂತಹಾ ನಂಬಿಕೆ ಮತ್ತು ವಿಶ್ವಾಸಗಳು ನಿಸ್ಸಂಶಯವಾಗಿಯೂ ಅಲ್ಲಾಹನಿಗೆ ಮಾಡುವ ದೊಡ್ಡ ಕುಫ್ರ್ ಆಗಿದೆ. ಇದು ಮುಚ್ಚುಮರೆ ಇಲ್ಲದ ನಗ್ನ ಶಿರ್ಕ್ ಆಗಿದೆ. ಇಂತಹಾ ವಿಶ್ವಾಸವಿರುವ ಜನರು ಇಸ್ಲಾಮಿನ ಡೇರೆಯಿಂದಲೇ ಹೊರಕ್ಕೆ ದಬ್ಬಲ್ಪಡುತ್ತಾರೆ. ನಾವು ಮುಸ್ಲಿಮರೆಂದು ಅವರೆಷ್ಟು ಗೋಗೆರೆದರೂ ಸರಿಯೇ

**ಮುಕ್ತಿಯು ಕೇವಲ ತೌಹೀದ್‌ನಿಂದ ಲಭಿಸುತ್ತದೆ :**

ತೌಹೀದ್, ಇಸ್ಲಾಮ್, ಈಮಾನ್ ಮತ್ತು ಮುಕ್ತಿಗಳಿಸಲಿರುವ ಏಕೈಕ ಹಾದಿ ಆರಾಧನೆಗಳನ್ನು

ಕೇವಲ ಅಲ್ಲಾಹನಿಗೆ ಮೀಸಲಾಗಿರಿಸುವುದಾಗಿದೆ. ಅವನೇ ಸಕಲ ವಿಶ್ವಗಳ ಮಾಲಕ ಪ್ರಭುವೆಂದು(ಮಾಲಿಕುಲ್ ಮುಲ್ಕ್) ಸರ್ವ ವಸ್ತುಗಳ ವ್ಯವಸ್ಥಾಪಕ, ಅವನು ತನ್ನ ಗುಣ-ನಾಮ-ವಿಶೇಷಣ-ಕಾರ್ಯವೈಖರಿಯಲ್ಲಿ ಪರಿಪೂರ್ಣನು ನಿಷ್ಣಾತನು ಆಗಿದ್ದಾನೆ. ಅವನಿಗೆ ಸಹಾಯಕರೊ-ಸಹಭಾಗಿಗಳೊ ಇರುವುದಿಲ್ಲ. ಅವನ ಸೃಷ್ಠಿಗಳಲ್ಲಿ ಯಾರಿಗೂ ಅವನಂತಹಾ, ಶಕ್ತಿಯೊ ಸಾಮರ್ಥ್ಯವೊ ಇರುವುದಿಲ್ಲ. ಅವನಿಗೆ ಸರಿಸಮವಾದ-ಸರಿಸಾಠಿಯಾದ ಯಾವ ಶಕ್ತಿಯೂ ಇಲ್ಲ. ಅವನ ಶಕ್ತಿ, ಅವನ ಸಾಮರ್ಥ್ಯ ಮತ್ತು ಅವನ ಕಾರ್ಯ ವೈಖರಿಯು ವ್ಯಕ್ತವಾಗಿದೆ. ಅವನೇ ಸಕಲ ಸಾಮ್ರಾಜ್ಯದ ಸಂಸ್ಥಾಪಕನಾಗಿದ್ದಾನೆ. ಅವನಿಗೆ ಯಾವ ಸಹಭಾಗಿಗಳೂ ಇಲ್ಲ. ಅವನ ಆದೇಶಗಳನ್ನು ತಡೆ ಹಿಡಿಯುವವರು ಕೂಡಾ ಯಾರೂ ಇಲ್ಲ.

ಇದೇ ಅಲ್ಲಾಹನ ತೌಹೀದ್ ಆಗಿದೆ. ಆರಾಧನಾ ಕರ್ಮಗಳನ್ನು ಏಕೈಕನಾದ ಅಲ್ಲಾಹನಿಗೆ ಮೀಸಲಾಗಿರಿಸುವುದೆಂದು ಹೇಳುವುದು ಇದಕ್ಕೇ ಆಗಿದೆ. ಸರ್ವ ಪ್ರವಾದಿಗಳ ದೀನ್ ಕೂಡಾ ಇದುವೇ. ಇದುವೇ ಅಲ್ಲಾಹನ ವಚನ

(سورة الفاتحة، الآية ٥) ''اِيَّاكَ نَعْبُدُ وَاِيَّاكَ نَسْتَعِيْنُ'' ದ ಅರ್ಥವಾಗಿದೆ. ಅಂದರೆ "ನಾವು ನಿನ್ನನ್ನೇ ಆರಾಧಿಸುತ್ತೇವೆ. ನಿನ್ನೊಂದಿಗೇ ಸಹಾಯಯಾಚಿಸುತ್ತೇವೆ" ನಿನ್ನನ್ನು ಆರಾಧನಾರ್ಹನೆಂದು ತಿಳಿದು ನಿನ್ನನ್ನೇ ಅನುಸರಿಸಿ ನಡೆದು, ನಿನ್ನ ಮೇಲೆ ಮಾತ್ರ ಭರವಸೆ ಇಟ್ಟು, ನಿನ್ನ ಭಯ-ಭಕ್ತಿಯೊಂದಿಗೆ ನಿನ್ನ ಸಹಾಯವನ್ನು ನಿರೀಕ್ಷಿಸುತ್ತೇವೆ.

ಹಝ್ರತ್ ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುವಂತೆ, ನಾವು ಏಕೈಕನಾದ ನಿನ್ನ ಆರಾಧನೆಯನ್ನೇ ಮಾಡಿಕೊಂಡು ನಿನ್ನ ಮೇಲೆ ಮಾತ್ರ ಭರವಸೆ ಇಟ್ಟುಕೊಂಡು ನಿನ್ನ ಭಯದೊಂದಿಗೆ ನಿನ್ನನ್ನು ಅನುಸರಿಸಿ ನಡೆಯುತ್ತಾ ನಮ್ಮೆಲ್ಲಾ ಅವಶ್ಯಕತೆಗಳಲ್ಲೂ ನಿನ್ನಿಂದಲೇ ಸಹಾಯಯಾಚಿಸುತ್ತೇವೆ.

**ಇಬಾದತ್ ಎಂಬ ಪದ :**

ಆರಾಧನೆಗೆ ಅರ್ಹನಾದವನು ಕೇವಲ ಅಲ್ಲಾಹನು ಎಂದು ಅಂಗೀಕರಿಸುವುದು. ಅವನ ನಿಯಮ ನಿರ್ದೇಶನವನ್ನು ಕಡ್ಡಾಯವಾಗಿ ಅನುಸರಿಸುವುದು. ಅವನು ನಿಷೇಧಿಸುವ ಕಾರ್ಯಗಳನ್ನು ಬಿಟ್ಟು ದೂರ ಸರಿಯುವುದು. ಆರಾಧಿಸಲ್ಪಡುವ ಹಕ್ಕು ಕೇವಲ ಅವನಿಗಷ್ಟೇ ಇರುವುದೆನ್ನುವ ವಿಷಯದಲ್ಲಿ ವಿಶ್ವಾಸ ತಾಳುವುದು. ಅವನೇ ಸಕಲ ಜಗತ್ತಿನ ಪರಿಪಾಲಕ. ತನ್ನ ಸೃಷ್ಠಿಗಳ ಅವಶ್ಯಕತೆಗಳನ್ನು ಪೂರೈಸುವವನು. ಸಕಲ ವಸ್ತುಗಳ ಮ್ಹಾಲಕನು-ಸೃಷ್ಠಿಕರ್ತನು, ತನ್ನ ಗುಣ-ನಾಮ-ವಿಶೇಷಣಗಳಲ್ಲಿ ಪರಿಪೂರ್ಣನು. ಎಲ್ಲಾ ರೀತಿಯ ಕುಂದು-ಕೊರತೆಗಳಿಂದ ಮುಕ್ತನಾದ ಪರಿಶುದ್ಧನವನು. ಅವನ ಶಕ್ತಿ-ಸಾಮರ್ಥ್ಯ-ಕಾರ್ಯವೈಖರಿಯಲ್ಲಿ ಅವನಿಗೆ ಸಹಾಯಕರೊ, ಸಹಭಾಗಿಗಳೊ ಯಾರೂ ಇಲ್ಲ. ಸೃಷ್ಠಿ-ವ್ಯವಸ್ಥಾಪನೆ ಮತ್ತು ಪರಿಪಾಲನೆಯಲ್ಲಿ ಪರಿಪೂರ್ಣನೂ ನಿಷ್ಣಾತನೂ ಆದ ಅವನು ಸರ್ವಶಕ್ತಿ-ಸಾಮರ್ಥ್ಯಗಳ ಒಡೆಯನು ಸರ್ವ ವಸ್ತುಗಳ ಮೇಲೆ ನಿಯಂತ್ರಣ ಹೊಂದಿದವನೂ ಆಗಿದ್ದಾನೆ.

**ಪ್ರವಾದಿಗಳನ್ನು ದೃಢೀಕರಿಸುವುದು ಮತ್ತು ಇಸ್ಲಾಮ್ ನಿಷೇಧಿಸುವ ಕಾರ್ಯಗಳಿಂದ ದೂರವಿರುವುದು :**

ಮೇಲಿನ ಎಲ್ಲಾ ವಿಷಯಗಳೊಂದಿಗೆ ಅಲ್ಲಾಹನು ಈ ಲೋಕದಲ್ಲಿ ನಿಯುಕ್ತಿಗೊಳಿಸಿದ ಸರ್ವ ಪ್ರವಾದಿಗಳ ಕುರಿತು ಸಾಕ್ಷ್ಯವಹಿಸುವುದು ಕೂಡಾ ಅತ್ಯಾವಶ್ಯಕವಾಗಿದೆ. ಅದರಲ್ಲೂ ಪ್ರಾಮುಖ್ಯವಾದುದು ನಮ್ಮ ಪ್ರವಾದಿ ಮುಹಮ್ಮದ್(ಸ)ರವರ ಮೇಲಿನ ವಿಶ್ವಾಸವಾಗಿದೆ.

ತಮ್ಮ ಸರ್ವ ಆರಾಧನಾ ಕರ್ಮಗಳನ್ನು ಏಕೈಕನಾದ ಅಲ್ಲಾಹನಿಗೆ ಮೀಸಲಾಗಿರಿಸಿ, ಅವನ ಪ್ರವಾದಿಗಳು ಪ್ರತ್ಯೇಕವಾಗಿ ಅವನ ಅಂತಿಮ ಪ್ರವಾದಿ ಮುಹಮ್ಮದ್(ಸ)ರನ್ನು ದೃಡೀಕರಿಸಿಕೊಂಡು ಅವರ ಶರೀಅತನ್ನು ಅನುಸರಿಸುತ್ತಾ ಅದರಲ್ಲಿ ಸ್ಥಿರವಾಗಿ ನಿಂತುಕೊಂಡವರಾದರೂ ಇಸ್ಲಾಮ್‌ನ ಸೀಮೊಲ್ಲಂಘನೆ ಮಾಡುವಂತಹಾ ಕರ್ಮಗಳಲ್ಲಿ ಹಲವು ಅಥವಾ ಒಂದನ್ನು ಕೂಡಾ ತನ್ನ ಮಟ್ಟಿಗೆ ಧರ್ಮ ಸಮ್ಮತವೆಂದು ಅಂಗೀಕರಿಸಿಕೊಂಡು ಪ್ರವರ್ತಿಸಿದರೆ ಆ ಪ್ರವರ್ತನೆಯು ಅವನ ಎಲ್ಲಾ ಸತ್ಕರ್ಮಗಳನ್ನು ವ್ಯರ್ಥ ಮತ್ತು ನಿಷ್ಪ್ರಯೋಜಕವಾಗಿ ಮಾರ್ಪಡಿಸುವುದು. ಅವನ ವಿಶ್ವಾಸ ಮತ್ತು ಸತ್ಪ್ರವರ್ತಿಗಳೇನೇನೂ ಕೆಲಸಕ್ಕೆ ಬಾರದು.

**ಮುಹಮ್ಮದ್(ಸ) ಅಂತ್ಯ ಪ್ರವಾದಿಯೆಂದು ವಿಶ್ವಾಸವಿಡುವುದು :**

ಮುಹಮ್ಮದ್(ಸ)ರವರ ಎಲ್ಲಾ ಮಾತುಗಳನ್ನೂ ಅಂಗೀಕರಿಸಿ, ಅವರ ಶರೀಅತಿನ ಪ್ರತಿಯೊಂದು ನಿಯಮಗಳನ್ನೂ ಪಾಲಿಸಿ ಜೀವಿಸುವುದರೊಂದಿಗೆ ಮುಹಮ್ಮದ್(ಸ)ರ ನಂತರ ಮುಸೈಲಿಮ ಕೂಡಾ ಪ್ರವಾದಿಯೆಂದು ಒಬ್ಬ ಹೇಳುತ್ತಾನೆಂದಿಟ್ಟುಕೊಳ್ಳಿ. ಮುಸೈಲಿಮ ಎಂದರೆ ಮುಹಮ್ಮದ್(ಸ)ರ ನಂತರ ಯಮಾಮದಿಂದ ನಾನೂ ಒಬ್ಬ ಪ್ರವಾದಿಯೆಂದು ವಾದಿಸಿದ ಕಳ್ಳ ಪ್ರವಾದಿಯಾಗಿದ್ದಾನೆ. ಅವನ ವಿರುದ್ಧ ಸಹಾಬಿಗಳು ಅಬೂಬಕ್ಕರ್(ರ) ಕಾಲದಲ್ಲಿ ಜಿಹಾದ್ ಮಾಡಿದ್ದರು. ಈ ರೀತಿಯ ಮಾತುಗಳನ್ನಾಡುವ ವ್ಯಕ್ತಿಯ ವಿಶ್ವಾಸ ನಷ್ಟ ಹೊಂದಿ ಬಿಡುತ್ತದೆ. ಅವನಿಗೆ ಅವನ ದಿನದ ಉಪವಾಸವೊ, ರಾತ್ರಿಯ ಆರಾಧನೆಯೊ ಫಲ ನೀಡದು. ಅವನ ಯಾವುದೇ ಸತ್ಕರ್ಮವೂ ಅವನಿಗೆ ಪ್ರಯೋಜನಕ್ಕೆಬಾರದು. ಏಕೆಂದರೆ ಅವನು ಇಸ್ಲಾಮ್ ನಿರಾಕರಿಸುವ ಒಂದು ಸಂಗತಿಯನ್ನು ಪುಷ್ಠೀಕರಿಸಿದ ಸುಳ್ಳುಗಾರ ಮುಸೈಲಿಮನನ್ನು ಅವನು ಪ್ರತಿವಾದಿಸಿದ. ಇದರಿಂದ ಅಲ್ಲಾಹನ ವಚನವನ್ನು ಅವನು ನಿರಾಕರಿಸಿದ ಮತ್ತು ಅದಕ್ಕೆ ವಿರುದ್ಧ ಪ್ರವರ್ತಿಸಿದ. ಅಲ್ಲಾಹನ ಆ ವಚನ ಈ ರೀತಿ ಇದೆ.

مَا كَانَ مُحَمَّدٌ اَبَا اَحَدٍ مِّنْ رِجَالِكُمْ وَلٰكِنْ رَّسُوْلَ اللّٰهِ وَخَاتَمَ النَّبِيِّيْنَ (سورة الاحزاب، الآية ٤٠)

**"ಜನರೇ ಮುಹಮ್ಮದರು ನಿಮ್ಮ ಪುರುಷರ ಪೈಕಿ ಯಾರದೇ ತಂದೆಯಲ್ಲ. ವಾಸ್ತವದಲ್ಲಿ ಅವರು ಅಲ್ಲಾಹನ ಸಂದೇಶವಾಹಕರು ಮತ್ತು ಪ್ರವಾದಿಗಳಲ್ಲಿ ಕೊನೆಯವರಾಗಿರುತ್ತಾರೆ."**

ಇದೇ ಪ್ರಕಾರ ಪ್ರವಾದಿ(ಸ)ರವರ ಹಲವಾರು ಅಧಿಕೃತ ಹದೀಸ್‌ಗಳಿಂದಲೂ ಅವರು(ಸ) ಪ್ರವಾದಿಗಳ ಶೃಂಖಲೆಯ ಕಟ್ಟ ಕಡೆಯ ಕೊಂಡಿಯಾಗಿದ್ದರೆನ್ನುವುದು ಸಾಬೀತಾಗುತ್ತದೆ. ಆದ್ದರಿಂದ ಅವನ ಮಾತು ಈ ಪ್ರವಾದಿ ವಚನಗಳಿಗೂ ವಿರುದ್ಧವಾದುದಾಗಿರುತ್ತದೆ.

**ಶಿರ್ಕ್ ಎಲ್ಲಾ ಸತ್ಕರ್ಮಗಳನ್ನು ವ್ಯರ್ಥಗೊಳಿಸುತ್ತದೆ :**

ಒಬ್ಬ ವ್ಯಕ್ತಿ ಉಪವಾಸ ಅನುಷ್ಠಿಸುತ್ತಾ ದಿನದಲ್ಲಿ ಹಸಿವು ಮತ್ತು ದಾಹವನ್ನು ಸಹಿಸಿಕೊಳ್ಳುತ್ತಾನೆ. ರಾತ್ರಿ ಸಮಯದಲ್ಲಿ ನಿಂತು ಸುದೀರ್ಘ ಕುರ್‌ಆನ್ ಪಠಿಸುತ್ತಾ ನಮಾಝ್ ನಿರ್ವಹಿಸುತ್ತಾನೆ. ಅವನು ತನ್ನೆಲ್ಲಾ ಇಬಾದತ್‌ಗಳನ್ನೂ ಅಲ್ಲಾಹನನ್ನು ಸಂತೃಪ್ತಿ ಪಡಿಸುವ ಉದ್ದೇಶದಿಂದಲೇ ಮಾಡುತ್ತಾನೆ. ಪ್ರವಾದಿ(ಸ)ರವರನ್ನು ಅನುಸರಿಸಿಕೊಂಡು ನಡೆಯುತ್ತಾನೆ. ಅದರೊಂದಿಗೇ ಅವನು ಕೆಲವು ಇತರ ಕರ್ಮಗಳನ್ನೂ ನಿರ್ವಹಿಸುತ್ತಾನೆ. ಅದನ್ನು ಅವನು ಪ್ರವಾದಿಗಳ ಅವುಲಿಯಾರವರ ಧಾರ್ಮಿಕ ನೇತಾರರನ್ನು ಆಧರಿಸುವ ನೆಲೆಯಲ್ಲಿ, ಪೂರ್ವಿಕರು, ಆಚರಿಸುತ್ತಿದ್ದರೆಂಬ ಕಾರಣಕ್ಕೆ ನಿರ್ವಹಿಸುತ್ತಾನೆ. ಇದರಿಂದ ಅವನು ಪ್ರವಾದಿಗಳ ಅವುಲಿಯಾ ಅಥವಾ ಮಹಾತ್ಮರ ಸಂತೃಪ್ತಿಪಡಿಸಬಯಸುತ್ತಾನೆ ಮತ್ತು ಅವರೊಂದಿಗೆ ತನ್ನ ಅಹವಾಲುಗಳನ್ನು ತೋಡಿಕೊಳ್ಳುತ್ತಾನೆ. ಸಹಾಯವನ್ನು ಅಪೇಕ್ಷಿಸುತ್ತಾನೆ. ಇದರಿಂದ ಅವನ ಸತ್ಕರ್ಮಗಳೆಲ್ಲವೂ ವ್ಯರ್ಥವಾಗುವುದು. ಅಲ್ಲಾಹನೊಂದಿಗೆ ಪಶ್ಚಾತ್ತಾಪಪಟ್ಟು ಮರಳುವ ತನಕ ಅವನಿಗೆ ಕ್ಷಮೆಯು ದೊರಕಲಾರದು.

ಅಲ್ಲಾಹನು ಹೇಳುತ್ತಾನೆ.

وَلَوْاَشْرَكُوْا لَحَبِطَ عَنْهُمْ مَّاكَانُوْايَعْمَلُوْنَ(سورة الانعام ، الآية٨٨)

**"ಅವರಲ್ಲಾರಾದರೂ `ದೇವ ಸಹಭಾಗಿತ್ವ' ಮಾಡುತ್ತಿದ್ದರೆ ಅವರು ಮಾಡಿದ್ದೆಲ್ಲ ವ್ಯರ್ಥವಾಗುತ್ತಿತ್ತು''**(6-88)

ಅಲ್ಲಾಹು ಮುಂದುವರಿಸುತ್ತಾನೆ

وَلَقَدْ اُوْحِىَ اِلَيْكَ وَاِلَى الَّذِيْنَ مِنْ قَبْلِكَ، لَئِنْ اَشْرَكْتَ
لَيَحْبَطَنَّ عَمَلُكَ وَلَتَكُوْنَنَّ مِنَ الْخٰسِرِيْنَ (سورة الزمر، الآية٦٥)

**"ನೀವು ಇದನ್ನು ಅವರೊಡನೆ ಸ್ಪಷ್ಟವಾಗಿ ಹೇಳಿಬಿಡಬೇಕು. ಏಕೆಂದರೆ ನೀವು ದೇವ ಸಹಭಾಗಿತ್ವವೆಸಗಿದರೆ ನಿಮ್ಮ ಕರ್ಮವು ನಿರಾರ್ಥಕಗೊಳ್ಳುವುದು ಮತ್ತು ನೀವು ನಷ್ಟ ಹೊಂದಿದವರಲ್ಲಾಗುವಿರೆಂದು ನಿಮ್ಮ ಕಡೆಗೂ ನಿಮಗಿಂತ ಮುಂಚೆ ಗತಿಸಿದ ಸಕಲ ಪ್ರವಾದಿಗಳ ಕಡೆಗೂ ದಿವ್ಯವಾಣಿ ಕಳುಹಿಸಲಾಗಿದೆ''**(39-65)

**ಒಂದು ವಸ್ತುವನ್ನು ಸ್ವಯಂ ಹಲಾಲ್-ಹರಾಮ್ ಎಂದು ವಿಧಿಸುವುದು ಮತ್ತು ಅಲ್ಲಾಹನ ವಚನವನ್ನು ನಿರ್ಲಕ್ಷಿಸುವುದರಿಂದ ವ್ಯಕ್ತಿಯು ಕಾಫಿರ್ ಆಗಿ ಬಿಡುತ್ತಾನೆ :**

ಒಬ್ಬ ವ್ಯಕ್ತಿ ಅಲ್ಲಾಹನ ಎಲ್ಲಾ ವಚನಗಳನ್ನೂ ಸತ್ಯವೆಂದು ಅಂಗೀಕರಿಸಿದ ಮತ್ತು

ದೃಢೀಕರಿಸಿಕೊಂಡ ಬಳಿಕ ವ್ಯಬಿಚಾರವು ನಿಷಿದ್ಧವೆನ್ನುವುದನ್ನು ನಿರಾಕರಿಸಿದ ಮತ್ತು ಅದನ್ನು ಸಮರ್ಥಿಸುವ ಮಾತುಗಳನ್ನಾಡಿದ, ಅಥವಾ ಸಲಿಂಗಕಾಮವನ್ನು ಸಮರ್ಥಿಸಿದ ಅಥವಾ ಮದ್ಯಪಾನವನ್ನು ಸಮರ್ಥಿಸಿದನೆಂದಾದರೆ ಆ ಕಾರಣಕ್ಕೆ ಅವನು ಸತ್ಯನಿಷೇಧಿ ಕಾಫಿರ್ ಎನಿಸುತ್ತಾನೆ. ವ್ಯಕ್ತಿಯು ಅದೆಷ್ಟೇ ದೊಡ್ಡ ಆಬಿದ್ ಆಗಿದ್ದರೂ ಕೂಡಾ ಈ ನಿಯಮವು ಅವನನ್ನು ಬಾಧಿಸಿಯೆ ತೀರುವುದು. ಏಕೆಂದರೆ ನಿಷೇಧ(ಹರಾಮ್)ವೆಂದು ಸಾರಿದ ಒಂದು ಸಂಗತಿಯನ್ನು (ಅದೆಷ್ಟೇ ಸಣ್ಣದಾದರೂ ಸರಿ) ಅವನು ತನ್ನ ಮಟ್ಟಿಗೆ ಹಲಾಲ್ ಗೊಳಿಸಿದ. ಈ ಮೂಲಕ ಅವನು ಅಲ್ಲಾಹನನ್ನು ನಿರಾಕರಿಸುವವನಾಗಿ ಬಿಟ್ಟ. ಇದರಿಂದ ಅವನು ಇಸ್ಲಾಮಿನ ಸೀಮೋಲ್ಲಂಘನೆ ಮಾಡಿದ. ಆದ್ದರಿಂದ ಇವನು ಪ್ರವರ್ತಿಸಿದ ಯಾವುದೇ ಸತ್ಕರ್ಮವೂ ಇವನಿಗೆ ಪ್ರಯೋಜನಕಾರಿ ಎನಿಸದು ಮತ್ತು ಅಲ್ಲಾಹನ ಏಕತೆಯ ಕುರಿತಾದ ಅವನ ವಿಶ್ವಾಸವೂ ಸಹಕಾರಿಯಾಗದು. ಈ ಕುರಿತು ಸರ್ವ ಮುಸಲ್ಮಾನರೂ ಏಕಾಭಿಪ್ರಾಯ ಹೊಂದಿದ್ದಾರೆ.

ಅದೇ ಪ್ರಕಾರ ಯಾರಾದರೂ ನೂಹ್(ಅ), ಹೂದ್(ಅ), ಇಬ್ರಾಹೀಮ್(ಅ), ಇಸ್ಮಾಯಿಲ್(ಅ), ಇಸ್ಹಾಖ್(ಅ) ಯಅಕೂಬ್(ಅ) ಅಥವಾ ಯಾವುದೇ ಅಲ್ಲಾಹನ ಪ್ರವಾದಿಗಳನ್ನು ಅವರು ನೆಬಿಯಲ್ಲವೆಂದು ಹೇಳಿದರೆ ಅದರಿಂದ ಅವನು ಅಲ್ಲಾಹನನ್ನು ನಿರಾಕರಿಸಿದವನೆಂದು ಪರಿಗಣಿಸಲ್ಪಡುವನು. ಅವನ ಸರ್ವ ಸತ್ಕರ್ಮಗಳು ರದ್ದುಗೊಳಿಸಲ್ಪಡುವುದು. ಏಕೆಂದರೆ ಅವನು ತನ್ನ ಮಾತಿನಿಂದ ಆ ಪ್ರವಾದಿಗಳ ಕುರಿತು ಅಲ್ಲಾಹನು ಹೇಳಿದ ಮಾತನ್ನು ಆ ಮಾತು ಉಲ್ಲೇಖಿಸಲ್ಪಟ್ಟ ಅಲ್ಲಾಹನ ಗ್ರಂಥವನ್ನೂ ಧಿಕ್ಕರಿಸಿದ್ದಾನೆ.

ಅದೇ ಪ್ರಕಾರ ಅಲ್ಲಾಹು ಅನುಮತಿಸಿದ, ಹಲಾಲ್ ಎಂದು ಹೇಳಿದ ಒಂದು ಸಂಗತಿಯನ್ನು ಯಾರಾದರೂ ನಿಷಿದ್ಧ(ಹರಾಮ್) ಎಂದು ಬಿಟ್ಟರೆ ಅವನು ತೌಹೀದ್‌ನಲ್ಲಿ ಸ್ಥಿರವಾಗಿದ್ದವನಾಗಿದ್ದರೂ ಕೂಡಾ-ಕಡ್ಡಾಯ ಕರ್ಮಗಳನ್ನು ಕಟ್ಟು-ನಿಟ್ಟಾಗಿ ನಿರ್ವಹಿಸುತ್ತಿರುವವನಾಗಿದ್ದರೂ ಕೂಡಾ ಅವನು ಧರ್ಮಭ್ರಷ್ಟ ಅಥವಾ ಕಾಫಿರ್ ಎಂದೇ ಪರಿಗಣಿಸಲ್ಪಡುವನು. ಅವನು ಇಸ್ಲಾಮಿನ ಚೌಕಟ್ಟಿನಿಂದ ಹೊರಕ್ಕೆಸೆಯಲ್ಪಡುವನು. ಅವನಿಗೆ ಅವನ ಈ ಧಿಕ್ಕಾರದ ಕುರಿತು ಸಾಧಾರವಾಗಿ ತಿಳುವಳಿಕೆ ನೀಡಲಾದ ನಂತರವಷ್ಟೇ ಈ ಆದೇಶ ಅವನ ಮಟ್ಟಿಗೆ ಜಾರಿಗೊಳಿಸಬಹುದಾಗಿದೆ. ಏಕೆಂದರೆ ಕೆಲವು ಜನರು ತಿಳುವಳಿಕೆ ಇಲ್ಲದೆ ಇಂತಹಾ ತಪ್ಪೆಸಗಿ ಬಿಡುತ್ತಾರೆ.

ಕೆಲವರು ಒಂಟೆಯ, ಹಸುವಿನ ಮಾಂಸವನ್ನು ತಮ್ಮ ಮಟ್ಟಿಗೆ ಹರಾಮ್ ಎಂದು ಮಾಡಿಕೊಳ್ಳುವವರಿದ್ದಾರೆ. ಅದೇ ಪ್ರಕಾರ ಕೆಲವರು ಅಕ್ಕಿ-ಗೋಧಿ, ಜೋಳ ಮುಂತಾದ ಧಾನ್ಯಗಳಲ್ಲಿ ಒಂದನ್ನು ತಮ್ಮ ಮಟ್ಟಿಗೆ ಹರಾಮ್‌ಗೊಳಿಸುತ್ತಾರೆ. (ವೈದ್ಯಕೀಯ ಅಥವಾ ಇತರ ಸಕಾರಣಗಳ ಹೊರತು) ಅಲ್ಲಾಹು ಅನುಮತಿಸಿದ ವಸ್ತುಗಳನ್ನು ಹರಾಮ್ ಎಂದು ಘೋಷಿಸುವುದರಿಂದ ಅಲ್ಲಾಹನನ್ನು ತಿರಸ್ಕರಿಸಿದಂತೆಯೇ ಆಗುತ್ತದೆ. ಇಂತವರು ಮುರ್ತದ್ದ್‌ಗಳೆನಿಸುತ್ತಾರೆ.

ಅವರ ನಮಾಝ್ ಉಪವಾಸ ಮತ್ತು ಎಲ್ಲಾ ರೀತಿಯ ಸತ್ಕರ್ಮಗಳೂ ನಷ್ಟ ಹೊಂದುತ್ತದೆ. ಏಕೆಂದರೆ ಅವನ ಮಾತು ಅವನ ದೀನಿನ ಅಡಿಪಾಯವನ್ನೇ ಬುಡಮೇಲು ಮಾಡುವುದಾಗಿರುತ್ತದೆ. ಅಲ್ಲಾಹನು ಹೇಳುತ್ತಾನೆ.

وَلَوْ اَشْرَكُوْا لَحَبِطَ عَنْهُمْ مَاكَانُوْا يَعْمَلُوْنَ(سورة الانعام،الآية ٨٨)

"ಅವರಲ್ಲಾರಾದರೂ 'ದೇವ ಸಹಭಾಗಿತ್ವ' ಮಾಡುತ್ತಿದ್ದರೆ ಅವರು ಮಾಡಿದ್ದೆಲ್ಲ ವ್ಯರ್ಥವಾಗುತ್ತಿತ್ತು"(6-88)

**ರಾರಾಜಿಸುತ್ತಿರುವ ಅಂಧಶ್ರದ್ಧಗಳು :**

ನಾವಿಂದು ಜೀವಿಸುತ್ತಿರುವ ವಾತಾವರಣದಲ್ಲಿ ಅಂಧಶ್ರದ್ಧೆಗಳು ಮತ್ತು ಕಂದಾಚಾರಗಳ ಕತ್ತಲು ಕವಿದುಕೊಂಡಿದೆ. ಅರಿವಿನ ಕೊರತೆ ಇದೆ. ಹೆಚ್ಚಿನ ಜನರು ಕೇವಲ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವ, ಅಭಿವೃದ್ಧಿಪಡಿಸಿಕೊಳ್ಳುವ ವಿಷಯದಲ್ಲಷ್ಟೇ ಆಸಕ್ತಿ ಹೊಂದಿದ್ದಾರೆ. ಸೃಷ್ಟಿಕರ್ತನ ಕುರಿತು ಅವನ ಧರ್ಮದ ಕುರಿತು ಯಾರಿಗೂ ಕಾಳಜಿ ಇದ್ದಂತಿಲ್ಲ. ಏಕೆಂದರೆ ಅವರು ಆಸಕ್ತಿ ವಹಿಸಿರುವ ಜೀವನ್ಯಸಿರಿಯ ಆಕಾಂಕ್ಷೆಯು ಅವರನ್ನು ಆ ಕುರಿತು ಆಲೋಚಿಸುವುದರಿಂದ ತಡೆಯುತ್ತಿದೆ. ಜನರ ಶಿಕ್ಷಣ ಮತ್ತು ತರಬೇತಿಯು ಕೂಡಾ ಕೇವಲ ಇಹಲೋಕಕ್ಕೆ ಸೀಮಿತಗೊಂಡಿದೆ. ಧರ್ಮದ ಕುರಿತು ಅರಿವು ಗಳಿಸುವುದು ಅಲ್ಲಾಹನ ಶರೀಅತ್‌ನ ಕುರಿತು, ತೌಹೀದಿನ ಕುರಿತು ಅಧ್ಯಯನ ನಡೆಸುವುದರಿಂದ ಹೆಚ್ಚಿನ ಜನರು ಮುಖ ತಿರುಗಿಸಿಕೊಂಡಿದ್ದಾರೆ. ಈ ನಿಟ್ಟಿನಲ್ಲಿ ಗಮನ ಹರಿಸುವವರು ಬಹಳ ಕಡಿಮೆ.

**ಧರ್ಮನಿಷ್ಠೆ ಬೆಳೆಸಲು ದೀನೀ ಶಿಕ್ಷಣವನ್ನು ಪಡೆದುಕೊಳ್ಳುವುದು ಅನಿವಾರ್ಯವಾಗಿದೆ :**

ಹೇ ಅಲ್ಲಾಹನ ದಾಸನೆ, ಪಥಭ್ರಷ್ಟಗೊಳಿಸಬಲ್ಲ ವಿಷಯಗಳಿಂದ ಎಚ್ಚರಿಕೆ ವಹಿಸು. ಅಲ್ಲಾಹನ ಗ್ರಂಥ ಮತ್ತು ಅವನ ಪ್ರವಾದಿ(ಸ)ರವರ ಸುನ್ನತ್‌ನ್ನು ಕಲಿಯಲು, ಅವುಗಳ ಕುರಿತು ಚಿಂತನೆ ನಡೆಸಲು ಮತ್ತು ಅವುಗಳನ್ನು ಸರಿಯಾಗಿ ಮನವರಿಕೆ ಮಾಡಿಕೊಳ್ಳುವ ನಿಟ್ಟಿನಲ್ಲಿ ಗಮನವನ್ನು ಕೇಂದ್ರೀಕರಿಸು. ಅಲ್ಲಾಹನ ಏಕತ್ವ ಮತ್ತು ಅಲ್ಲಾಹನ ಕುರಿತು ವಿಶ್ವಾಸ ಭದ್ರಪಡಿಸಿಕೊಳ್ಳಲು ಅನುಕೂಲವಾಗುವಂತಹಾ ಅರಿವನ್ನು ಸಂಪಾದಿಸು. ಅದೇ ಪ್ರಕಾರ ಶಿರ್ಕ್ ಎಂದರೇನು? ಎಂಬುದನ್ನು ಅರಿತುಕೋ. ಅದರಿಂದ ನಿನಗೆ ನಿನ್ನ ದೀನ್‌ನ ಕುರಿತು ಎಚ್ಚರ ಉಂಟಾಗುವುದು. ಸ್ವರ್ಗದಲ್ಲಿ ಪ್ರವೇಶಿಸುವ ಮಾರ್ಗ ಯಾವುದು?ನರಕದಿಂದ ಮುಕ್ತಿ ಪಡೆಯಲಿರುವ ಉಪಾದಿ ಯಾವುದು? ಎನ್ನುವ ನಿಟ್ಟಿನಲ್ಲಿ ಚಿಂತನೆ ನಡೆಸು. ದೀನೀ ಅಧ್ಯಯನ ಶಿಭಿರಗಳಲ್ಲಿ, ಪ್ರವಚನ ಕಾರ್ಯಕ್ರಮಗಳಲ್ಲಿ ತಪ್ಪದೆ ಹಾಜರಾಗುವ ಪರಿಪಾಠ ಬೆಳೆಸಿಕೋ ಅಥವಾ ಧರ್ಮನಿಷ್ಠರಾದ ಜನರ ಸಹವಾಸ-ಸಂಬಂಧ ಸ್ಥಾಪಿಸು ಅದರಿಂದ ನಿನಗೆ ಸಾಕಷ್ಟು ಪ್ರಯೋಜನ ಲಭಿಸುವುದು. ಧಾರ್ಮಿಕ ವಿಷಯಗಳಲ್ಲಿ ನೀನೆಷ್ಟು ಅರಿವು ಸಂಪಾದಿಸುತ್ತಿಯೋ ಅಷ್ಟನ್ನು ಇತರರಿಗೆ ಹಂಚುವ ಸಾಮರ್ಥ್ಯ ನಿನಗೆ ಲಭ್ಯವಾಗುವುದು. ನಿನ್ನಿಂದ ಅಲ್ಲಾಹನ ಧರ್ಮದ ಪ್ರಭೆಯು ಹರಡುತ್ತಾ ಹೋದಂತೆ ನೀನು ಓರ್ವ ನಿಷ್ಠಾವಂತ ಮುಸ್ಲಿಮನಾಗಿ ಬದಲಾಗುತ್ತಾ ಹೋಗುತ್ತೀಯಾ.

# ದೇವ ಸಹಬಾಗಿತ್ವದ (ಶಿರ್ಕ್) ಎರಡು ರೂಪಗಳು

**1. ಶಿರ್ಕುಲ್ ಅಕ್ಬರ್ 2. ಶಿರ್ಕುರಲ್ ಅಸ್ಗರ್**

**(ದೊಡ್ಡ ಶಿರ್ಕ್) (ಸಣ್ಣ ಶಿರ್ಕ್)**

### ಶಿರ್ಕುಲ್ ಅಕ್ಬರ್

ಇದು ಅಲ್ಲಾಹನ ತೌಹೀದ್(ಏಕತೆ)ಗೆ ತದ್ವಿರುದ್ಧವಾದ ಪ್ರವರ್ತನೆಯಾಗಿದೆ. ಇದು ಇಸ್ಲಾಮಿನ ಬುನಾದಿಗೇ ಕೊಡಲಿ ಇಡುವ ಕಾರ್ಯವಾಗಿದೆ. ಇದು ಎಲ್ಲಾ ಸತ್ಕರ್ಮಗಳನ್ನು ವ್ಯರ್ಥಗೊಳಿಸುತ್ತದೆ. ದೇವನಿಗೆ ಸಹಭಾಗಿತ್ವವನ್ನು ನಿಶ್ಚಯಿಸುವ, ಅಲ್ಲಾಹನೊಂದಿಗೆ ಶಿರ್ಕ್ ಮಾಡುವ ಮುಶ್ರಿಕ್‌ಗಳು ನರಕಕ್ಕೆ ಇಂದನವಾಗುತ್ತಾರೆ.

ಶಿರ್ಕ್‌ನಲ್ಲಿ ಒಳಪಡುವ ಎಲ್ಲಾ ಪ್ರವರ್ತನೆಗಳೂ, ಮಾತುಗಳೂ, ಪ್ರಮಾಣಗಳಿಂದ ಅದು ಅಲ್ಲಾಹನಿಗೆ ಧಿಕ್ಕಾರ ಸೂಚಿಸುವ ಪ್ರವೃತ್ತಿ ಅಥವಾ ಮಾತುಗಳೆಂದು ದೃಢೀಕರಿಸಲ್ಪಟ್ಟಿರುವುದು. ಉದಾಹರಣೆಗೆ: ಮೃತರೊಂದಿಗೆ ಅಥವಾ ಪ್ರತಿಮೆಗಳೊಂದಿಗೆ ಅಹವಾಲು ತೋಡಿಕೊಳ್ಳುವುದು, ಸಹಾಯ ಯಾಚಿಸುವುದು, ಅಲ್ಲಾಹನು ನಿಷಿದ್ಧಗೊಳಿಸಿದ ವಸ್ತುಗಳನ್ನು ಹಲಾಲ್ ಎಂದು ಅಂಗೀಕರಿಸಿಕೊಳ್ಳುವುದು ಅಥವಾ ಅಲ್ಲಾಹನು ಅನುಮತಿಸಿದ ವಸ್ತುಗಳನ್ನು ಹರಾಮ್ ಎಂದು ಪರಿಗಣಿಸುವುದು, ಅಲ್ಲಾಹನ ಸಂದೇಶವಾಹಕರನ್ನು ಧಿಕ್ಕರಿಸುವುದು ಮತ್ತು ಸತ್ಕರ್ಮಗಳನ್ನು ನಿರರ್ತಕಗೊಳಿಸುವಂತಹಾ ಈ ಹಿಂದೆ ವಿವರಿಸಿದ ಕಾರ್ಯಗಳು ಇಸ್ಲಾಮ್‌ನ ಡೇರೆಯಿಂದಲೇ ಅವರನ್ನು ಹೊರಕ್ಕಟ್ಟುತ್ತದೆ.

ಶಿರ್ಕ್ ಅಕ್ಷಮ್ಯ ಅಪರಾಧವಾಗಿದೆ ಇದನ್ನು ಹೊರತುಪಡಿಸಿದ ಇತರ ಪಾಪಗಳನ್ನು ಅಲ್ಲಾಹು ಕ್ಷಮಿಸಬಹುದಾಗಿದೆ.

ಸೂರತುನ್ನಿಸಾದಲ್ಲಿ ಅಲ್ಲಾಹು ಹೇಳುತ್ತಾನೆ,

اِنَّ اللّٰهَ لَايَغْفِرُ اَنْ يُّشْرَكَ بِهٖ وَيَغْفِرُ مَادُوْنَ ذٰلِكَ لِمَنْ يَّشَآءُ
وَمَنْ يُّشْرِكْ بِاللّٰهِ فَقَدِافْتَرٰى اِثْماً عَظِيْماً (سورة النساء ٤٨)

**"ಅಲ್ಲಾಹು ತನ್ನೊಂದಿಗೆ ಇತರರನ್ನು ಸಹಬಾಗಿಗಳನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಅವನು ಕ್ಷಮಿಸಲಚ್ಚಿಸುವ ಇತರ ಎಲ್ಲವನ್ನು ಕ್ಷಮಿಸುವನು. ಅವನೊಂದಿಗೆ ಇತರ ಯಾರನ್ನಾದರೂ ಸಹಬಾಗಿಯನ್ನಾಗಿ ಮಾಡಿದವನು ಅತಿ ದೊಡ್ಡ ಸುಳ್ಳನ್ನು ಸೃಷ್ಟಿಸಿದನು ಮತ್ತು ಅತ್ಯಂತ ಘೋರ ಪಾಪವೆಸಗಿದನು."**(4/48)

ಶಿರ್ಕ್‌ಗೆ ಕ್ಷಮೆ ನೀಡುವುದಿಲ್ಲವೆಂದು ಅಲ್ಲಾಹನು ಇಲ್ಲಿ ಬಹಿರಂಗಪಡಿಸಿದ್ದಾನೆ. ಇದಕ್ಕೆ ಹೊರತಾದ ಎಲ್ಲಾ ಪಾಪಗಳೂ ಅವನ ಇಚ್ಛೆ ಮತ್ತು ಇಷ್ಟಕ್ಕೆ ಹೊಂದಿಕೊಂಡು ಕ್ಷಮಿಸಲ್ಪಡಲೂ ಬಹುದೆಂದು ಹೇಳಬಹುದಾಗಿದೆ. ಇತರ ಪಾಪಗಳಲ್ಲಿ ತೊಡಗಿದವರ ಕಾರ್ಯ ಅಲ್ಲಾಹನ

ಬಳಿಯಲ್ಲಿರುವುದು ಅವನು ಬಯಸಿದರೆ ಕ್ಷಮಿಸಬಹುದು ಅಥವಾ ಶಿಕ್ಷಿಸಬಹುದು. ಪಾಪವೆಸಗಿ ತೌಬಾ ಮಾಡದ ಸ್ಥಿತಿಯಲ್ಲಿ ಮರಣ ಹೊಂದಿದರೆ ಅಲ್ಲಾಹು ಅವರನ್ನು ಅವರ ಅಪರಾಧಕ್ಕೆ ತಕ್ಕಂತೆ ನರಕದಲ್ಲಿ ಹಾಕಿ ಶಿಕ್ಷಿಸಿ ನಂತರ ಸ್ವರ್ಗಕ್ಕೆ ಪ್ರವೇಶಿಸಗೊಡಬಹುದು. ಈ ಕುರಿತು ಅಹ್ಲೆಸುನ್ನತಿವಲ್ ಜಮಾಅತ್‌ನಲ್ಲಿ ಒಮ್ಮತಾಭಿಪ್ರಾಯವಿದೆ. ಆದರೆ ಖವಾರಿಜ್ ಮತ್ತು ಮುಅತಝಿಲಿಗಳು ಮತ್ತು ಅವರನ್ನು ಸಮರ್ಥಿಸುವವರು ಪಾಪವೆಸಗಿದವರು ಶಾಶ್ವತವಾಗಿ ನರಕದಲ್ಲಿರುವರೆಂಬ ವಿಶ್ವಾಸವಿಟ್ಟುಕೊಳ್ಳುತ್ತಾರೆ.

**ಸೂರತುಝ್ಝುಮರ್‌ನ ವಚನವು ಪಶ್ಚಾತ್ತಾಪ ಪಡುವವರಿಗೆ ಪೂರಕವಾಗಿದೆ :**

ಪರಿಶುದ್ಧನಾದ ಅಲ್ಲಾಹನು ಸೂರತುಝ್ಝುಮರ್‌ನ ಕೆಳಗಿನ ವಚನದಲ್ಲಿ ಕ್ಷಮೆಯ ಕುರಿತು ಸುಸ್ಪಷ್ಟವಾಗಿ ಸಾರ್ವತ್ರಿಕವಾಗಿ ಹೀಗೆ ಹೇಳುತ್ತಾನೆ.

قُلْ يٰعِبَادِىَ الَّذِيْنَ اَسْرَفُوْا عَلٰى اَنْفُسِهِمْ لَا تَقْنَطُوْا مِنْ رَّحْمَةِ اللّٰهِ،اِنَّ اللّٰهَ يَغْفِرُ الذُّنُوْبَ جَمِيْعًا،اِنَّهٗ هُوَ الْغَفُوْرُ الرَّحِيْمُ (سورة الزمر،الآية٥٣)

**“(ಸಂದೇಶವಾಹಕರೇ ನನ್ನ ಪರವಾಗಿ) ಹೇಳಿರಿ, ತಮ್ಮ ಮೇಲೆಯೇ ಅತಿರೇಕವೆಸಗಿಕೊಂಡಿರುವ ನನ್ನ ದಾಸರೇ, ಅಲ್ಲಾಹನ ಕರುಣೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹು ಸಕಲ ಪಾಪಗಳನ್ನು ಕ್ಷಮಿಸಿ ಬಿಡುತ್ತಾನೆ. ಅವನಂತೂ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.’’** (39-53)

ಈ ವಚನವನ್ನು ವಿಶ್ಲೇಷಿಸುತ್ತಾ ವಿದ್ವಾಂಸರು ಇದು ಪಶ್ಚಾತ್ತಾಪಪಡುವವರಿಗೊಂದು ಶುಭವಾರ್ತೆಯಾಗಿದೆ ಎಂದು ಹೇಳುತ್ತಾರೆ.

**ಸೂರತುನ್ನಿಸಾದ ಈ ವಚನವು ಪಶ್ಚಾತ್ತಾಪಪಡದವರ ಕುರಿತಾಗಿದೆ :**

ಸೂರತುನ್ನಿಸಾದ ಈ ವಚನವು ತೌಬಾ ಪ್ರಕಟಿಸದ ಜನರ ಕುರಿತಾಗಿದೆ. ಅವರು ಪಾಪ ಕಾರ್ಯಗಳಲ್ಲಿ ಮಗ್ನರಾಗಿದ್ದುಕೊಂಡು ಶಿರ್ಕ್ ಪ್ರವರ್ತಿಸುತ್ತಾ ಜೀವಿಸಿ ಅದೇ ಸ್ಥಿತಿಯಲ್ಲಿ ಮರಣಹೊಂದುತ್ತಾರೆ.

ಆ ವಚನದಲ್ಲಿ ಅಲ್ಲಾಹನ ಆದೇಶವು ಹೀಗಿದೆ,

اِنَّ اللّٰهَ لَا يَغْفِرُ اَنْ يُّشْرَكَ بِهٖ وَيَغْفِرُ مَادُوْنَ ذٰلِكَ لِمَنْ يَّشَآءُ(سورة النساء،الآيتان ٤٨،١١٦)

**“ಅಲ್ಲಾಹನು ತನ್ನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು’’**

**ಮಹಾಪಾಪಗಳನ್ನೆಸಗಿದವರು ಶಾಶ್ವತವಾಗಿ ನರಕದಲ್ಲಿರಲಾರರು :**

ಶಿರ್ಕ್‌ನ ಕಾರ್ಯಗಳನ್ನು ಮಾಡದ ಆದರೆ ಇತರ ಪಾಪ ಕಾರ್ಯಗಳನ್ನು ಪ್ರವರ್ತಿಸುತ್ತಾ ಮರಣ ಹೊಂದಿದವರು. ಅಂದರೆ ವ್ಯಬಿಚಾರದಂತಹಾ ಕಾರ್ಯಗಳು ನಿಷಿದ್ಧವೆಂದು ತಿಳಿದು ಪ್ರವರ್ತಿಸುವುದು. ಆದರೆ ಅದು ಹಲಾಲ್ ಎಂದು ವಾದಿಸದೆ ಪಶ್ಚಾತ್ತಾಪ ಪಡದೇ ಮರಣ ಹೊಂದಿದವರ ಪರಲೋಕದ ಸ್ಥಿತಿಯು ಅಲ್ಲಾಹನ ಇಚ್ಚೆಗೆ ಅಧೀನವಾಗಿರುತ್ತದೆನ್ನುವುದು ಅಹ್ಲೆ ಸುನ್ನತಿವಲ್ ಜಮಾಅತ್‌ನ ವಿಶ್ವಾಸವಾಗಿದೆ. ಅಲ್ಲಾಹನು ಇಚ್ಛಿಸಿದರೆ ಅವನನ್ನು ಕ್ಷಮಿಸಬಹುದು ಮತ್ತು ಅವನ ಏಕದೇವ ವಿಶ್ವಾಸವನ್ನೂ ಇಸ್ಲಾಮಿನ ನಿಯಮ-ನಿಬಂಧನೆಗಳ ಅಂಗೀಕಾರಕ್ಕಾಗಿ ಅವನನ್ನು ಸ್ವರ್ಗದಲ್ಲಿ ದಾಖಲಿಸಲೂ ಬಹುದಾಗಿದೆ.

ಒಂದೊಮ್ಮೆ ಅಲ್ಲಾಹನು ಅವನ ಪಾಪಗಳ ಕಾರಣಕ್ಕೆ ಅಂದರೆ ಅವನು ಎಸಗಿದ ವ್ಯಭಿಚಾರ, ಮಾತಾಪಿತರಿಗೆ ಕೃತಘ್ನತೆ ಸೂಚಿಸುವ ಕಾರ್ಯಗಳು, ಮದ್ಯದ ಅಮಲಿನಲ್ಲಿ ಎಸಗಿದ ಕೃತ್ಯಗಳು, ಕುಟುಂಬದಲ್ಲಿ ಬಿರುಕು ಉಂಟು ಮಾಡಿದ ಪ್ರವರ್ತಿಗಳು ಮತ್ತು ಇತರ ಮಹಾಪಾಪಗಳ ಕಾರಣಕ್ಕೆ ನರಕದ ಶಿಕ್ಷೆಯನ್ನು ನೀಡಲೂ ಬಹುದಾಗಿದೆ. ಈ ಕುರಿತಾದ ವಿವರಣೆಯನ್ನು ನಾವು ಈ ಮೊದಲೇ ನೀಡಿದ್ದೇವೆ.

**ಖವಾರಿಜ್ ಮತ್ತು ಮಅತಝಿಲಿಗಳ ವಿಶ್ವಾಸದಂತೆ ಪಾಪಿಗಳು ಸದಾ ನರಕದಲ್ಲಿರುತ್ತಾರೆ :**

ಖವಾರಿಜ್‌ಗಳು ಪಾಪವೆಸಗಿದವರು ಸದಾ ನರಕ ವಾಸಿಗಳಾಗಿರುತ್ತಾರೆಂಬ ವಿಶ್ವಾಸವಿಡುತ್ತಾರೆ. ಅವರು ಸತ್ಯ ನಿಷೇಧಿ(ಕಾಫಿರ್)ಗಳೇ ಆಗಿರುತ್ತಾರೆಂದೂ ಅವರು ಹೇಳುತ್ತಾರೆ. ಮುಅತಝಿಲಿಗಳು ಕೂಡಾ ಖವಾರಿಜ್‌ಗಳ ಈ ವಿಶ್ವಾಸವನ್ನು ಅನುಮೋದಿಸುತ್ತಾರೆ. ಆದರೆ ಅಹ್ಲೆ ಸುನ್ನತಿವಲ್ ಜಮಾಅತ್ ಇವರ ಈ ವಿಶ್ವಾಸವನ್ನು ವಿರೋಧಿಸುತ್ತದೆ. ಮಾತ್ರವಲ್ಲದೆ ವ್ಯಬಿಚಾರ, ಕಳ್ಳತನ, ಮಾತಾಪಿತರಿಗೆ ಕೃತಘ್ನತೆ ತೋರುವುದು ಮತ್ತಿತರ ಪಾಪಗಳನ್ನೆಸಗುವವರನ್ನು ಕಾಫಿರ್ ಎಂದು ಪರಿಗಣಿಸುವಂತಿಲ್ಲವೆಂಬ ನಿಲುವನ್ನು ಸ್ವೀಕರಿಸುತ್ತದೆ. ಈ ಕಾರಣಕ್ಕೆ ಅವರು ಶಾಶ್ವತವಾಗಿ ನರಕದಲ್ಲಿ ನರಳುವರೆಂಬುವುದನ್ನೂ ಅದು ಅಂಗೀಕರಿಸುವುದಿಲ್ಲ. ಆದರೆ ಇಂತಹಾ ಪ್ರವೃತ್ತಿಯನ್ನು ಅವರು ಹಲಾಲ್ ಎಂದು ಪರಿಗಣಿಸಿಕೊಂಡಿರದಿದ್ದರೆ ಮಾತ್ರ ಎಂಬ ಶರತ್ತನ್ನೂ ಅದು ವಿಧಿಸುತ್ತದೆ. ಇಂತಹಾ ಪಾಪಿಗಳ ಭವಿಷ್ಯವನ್ನು ಅದು ಅಲ್ಲಾಹನ ಇಚ್ಛೆಗೆ ಅಧೀನಪಡಿಸುತ್ತದೆ.

**ಶಿರ್ಕ್ ಮತ್ತು ಇತರ ಪಾಪಗಳಿಂದ ತೌಬಾ ಮಾಡಲು ಖಿಯಾಮತ್ ತನಕವೂ ಸಮಯವಿದೆ :**

ಈ ನಿಯಮವು ಒಂದು ದೊಡ್ಡ ಸಂಗತಿಯೇ ಆಗಿದೆ. ಇದನ್ನು ನಾವು ಉತ್ತಮ ರೀತಿಯಲ್ಲಿ ಮನವರಿಕೆ ಮಾಡಿಕೊಳ್ಳುವ ಮತ್ತು ಅರ್ಥೈಸಿಕೊಳ್ಳುವ ಅವಶ್ಯಕತೆ ಇದೆ. ಏಕೆಂದರೆ ಇದು ವಿಶ್ವಾಸದ ತಳಪಾಯವೇ ಆಗಿದೆ. ಸರ್ವ ಮುಸಲ್ಮಾನರೂ ತಮ್ಮ ಧರ್ಮದ ಯಾತಾರ್ಥ್ಯವನ್ನೂ ಮತ್ತು ಅದಕ್ಕೆ ವ್ಯತಿರಿಕ್ತವಾದ ಸಂಗತಿಗಳನ್ನೂ ಚೆನ್ನಾಗಿ ಅರಿತುಕೊಳ್ಳಬೇಕಾಗಿದೆ. ಅಲ್ಲಾಹನೊಂದಿಗೆ ಶಿರ್ಕ್(ಸಹಭಾಗಿಗಳನ್ನು ಸ್ಥಾಪಿಸುವ) ಮಾಡುವ ಕೃತ್ಯವು ಎಷ್ಟೊಂದು ಗಂಭೀರ ಪಾಪವೆನ್ನುವುದನ್ನು ತಿಳಿದುಕೊಳ್ಳಬೇಕಾಗಿದೆ. ಅದರೊಂದಿಗೇ ಶಿರ್ಕ್ ಮತ್ತು ಇತರ ಕೃತ್ಯಗಳಿಂದ ತೌಬಾ ಮಾಡುವ ಅವಕಾಶ ಅಂತಿಮ ದಿನದ ತನಕ ಲಭ್ಯವಿರುವುದೆನ್ನುವುದನ್ನು ಅರಿತಿರಬೇಕಾಗಿದೆ.

**ಅತ್ಯಂತ ದೊಡ್ಡ ದುರಂತ ದೀನ್‌ನಿಂದ ಮುಖ ತಿರುಗಿಸುವುದಾಗಿದೆ :**

ಅತ್ಯಂತ ದೊಡ್ಡ ದುರಂತ ದೀನ್‌ನಿಂದ ವಿಮುಖರಾಗಿದ್ದು ಅದರ ನಿಯಮ ನಿರ್ದೇಶನಗಳನ್ನು ನಿರ್ಲಕ್ಷಿಸುವುದಾಗಿದೆ. ಅದನ್ನು ಅಧ್ಯಯನ ಮಾಡುವ-ಅರಿತುಕೊಳ್ಳುವ ಅವಕಾಶಗಳನ್ನು ಕೈ ಚೆಲ್ಲುವುದಾಗಿದೆ. ಅರಿವುಗೇಡಿನಿಂದ ಜನರು ಶಿಕ್ರ್ ಮತ್ತು ಕುಫ್ರ್‌ನಲ್ಲಿ ಬಿದ್ದು ಬಿಡುತ್ತಾರೆ. ಅವರಿಗೆ ತಾವು ಯಾವ ರೀತಿಯ ಅಪಾಯದಲ್ಲಿ ಬಿದ್ದು ಬಿಟ್ಟಿದ್ದೇವೆನ್ನುವ ಕುರಿತು ಲವಶೇಷವೂ ಅರಿವಿರುವುದಿಲ್ಲ. ಇದಕ್ಕೆ ಕಾರಣವು ಅರಿವುಗೇಡಿತನವಾಗಿದೆ. ಧಾರ್ಮಿಕ ಶಿಕ್ಷಣದ ಕೊರತೆಯಾಗಿದೆ. ವಾಸ್ತವದಲ್ಲಿ ಪ್ರವಾದಿ(ಸ)ರವರು ಪ್ರಸ್ತುತಪಡಿಸಿದ್ದೇ ಆ ಕುರಿತಾದ ಅರಿವನ್ನಾಗಿದೆ-ಅವರ ನಿಯುಕ್ತಿಯ ಉದ್ದೇಶವೇ ಜನರಿಗೆ ಈ ಕುರಿತಾದ ಅರಿವನ್ನು ನೀಡುವುದಾಗಿದೆ.

**ಧಾರ್ಮಿಕ ಉಪನ್ಯಾಸ ಕಾರ್ಯಕ್ರಮಗಳಿಂದ ಅರಿವನ್ನು ಬೆಳೆಸಿಕೊಳ್ಳಿರಿ :**

ಬುದ್ಧಿವಂತರೇ! ಎಚ್ಚೆತ್ತುಕೊಳ್ಳಿರಿ, ನಿಮ್ಮ ಪ್ರಭುವಿನ ನಿಯಮ-ನಿರ್ದೇಶನಗಳನ್ನು ಪಾಲಿಸಿರಿ. ಅವನು ನಿಷೇಧಿಸಿದ ಕಾರ್ಯಗಳಿಂದ ದೂರವಿರಿ. ಎಲ್ಲಾ ಸತ್ಕರ್ಮಗಳನ್ನು ಅಲ್ಲಾಹನಿಗಾಗಿ ಮೀಸಲು ಗೊಳಿಸಿರಿ. ಸತ್ಯ ಮತ್ತು ದೀನೀ ಸೇವೆಗಾಗಿ ತ್ವರೆ ಮಾಡಿರಿ. ಧರ್ಮವನ್ನು ಆಧಾರ ಪ್ರಮಾಣಗಳಿಂದ ದೃಢಪಡಿಸಿಕೊಳ್ಳಿರಿ. ಕುರ್‌ಆನ್ ಮತ್ತು ಸುನ್ನತನ್ನು ಕಲಿಯುವ-ಅಧ್ಯಯನ ನಡೆಸುವ ಮನೋಭಾವ ಬೆಳೆಸಿಕೊಳ್ಳಿರಿ. ಅಲ್ಲಾಹನ ಗ್ರಂಥದಲ್ಲಿ ಮನಸ್ಸನ್ನು ಕೇಂದ್ರಿಕರಿಸಿರಿ. ಧಾರ್ಮಿಕ-ಸಭೆ-ಸಮಾರಂಭಗಳಲ್ಲಿ ಹಾಜರಾಗಿರಿ. ಸತ್ಯವಂತರು ಮತ್ತು ಧರ್ಮನಿಷ್ಠರ ಸಹವಾಸ ಮಾಡಿರಿ. ಇದರಿಂದ ಧರ್ಮದ ಕುರಿತು ಸರಿಯಾದ ಜ್ಞಾನವು ನಿಮಗೆ ಲಭಿಸುವುದು.

**ಪಾಪಗಳು ವಿಶ್ವಾಸವನ್ನು ದುರ್ಬಲಗೊಳಿಸುತ್ತದೆ :**

ಸೃಷ್ಟಿಕರ್ತನಿಂದ ಸತ್ಯ ಮತ್ತು ಸನ್ಮಾರ್ಗವನ್ನು ಖಚಿತ ಪಡಿಸಿಕೊಳ್ಳಬೇಕೆಂದರೆ ಅತ್ಯಂತ ಹೆಚ್ಚಾಗಿ ಅಲ್ಲಾಹನೊಂದಿಗೆ ದುಃಆ ಮಾಡುತ್ತಿರಬೇಕಾಗಿದೆ. ಒಂದೊಮ್ಮೆ ಯಾವುದಾದರೂ ಪಾಪಗಳು ಸಂಭವಿಸಿಬಿಟ್ಟರೂ ತೌಬಾ ಪ್ರಕಟಿಸುವುದಕ್ಕೆ ತ್ವರೆ ಮಾಡಬೇಕು. ಏಕೆಂದರೆ, ಆದಮ್(ಅ)ರವರ ಸಂತಾನವು ತಪ್ಪೆಸಗುವವರೇ ಆಗಿದ್ದಾರೆ. ತಪ್ಪೆಸಗುವವರಲ್ಲಿ ಉತ್ತಮರು ತಪ್ಪಿಗಾಗಿ ಪಶ್ಚಾತ್ತಾಪ ಪ್ರಕಟಿಸುವವರಾಗಿದ್ದಾರೆಂದು ಸಹೀಹ್ ಹದೀಸ್‌ಗಳಿಂದ ವ್ಯಕ್ತವಾಗುತ್ತದೆ. ಒಂದು ಗಮನಾರ್ಹ ಸಂಗತಿಯೆಂದರೆ, ನಿರಂತರ ತಪ್ಪೆಸಗುವುದರಿಂದ ಪಾಪಗಳನ್ನು ಪುನರಾವರ್ತಿಸುವುದರಿಂದ ದೀನ್‌ನ ಕುರಿತಾದ ಆಕರ್ಷಣೆ ಕಡಿಮೆಯಾಗುತ್ತದೆ ಮತ್ತು ವಿಶ್ವಾಸವು ದುರ್ಬಲಗೊಳ್ಳುವುದು.

**ತೌಬಾ ಮಾಡಲು ತಡಮಾಡಬೇಡಿರಿ :**

ಎಂತಹಾ ಪರಿಸ್ಥಿತಿ ಇದ್ದರೂ ಪಾಪಕ್ಕೆ ಪಶ್ಚಾತ್ತಾಪ ಪ್ರಕಟಿಸಲು-(ತೌಬಾ ಮಾಡಲು) ತಡಮಾಡಬಾರದು. ಪಾಪಗಳನ್ನು ತೊರೆದು, ಸಂಭವಿಸಿದ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟು ಮರಳಬೇಕು. ಅಲ್ಲಾಹು ಪಶ್ಚಾತ್ತಾಪ ಪಡುವವರ ಪಶ್ಚಾತ್ತಾಪವನ್ನು ಸ್ವೀಕರಿಸುವನು. ಪರಿಶುದ್ಧನಾದ ಅಲ್ಲಾಹು ಹೇಳುತ್ತಾನೆ.

وَتُوبُوا اِلَى اللهِ جَمِيعًا اَيُّهَاالْمُؤمِنُونَ لَعَلَّكُمْ تُفْلِحُونَ(سورة النور الآية٣١)

**"ಸತ್ಯ ವಿಶ್ವಾಸಿಗಳೇ! ನೀವೆಲ್ಲರೂ ಸೇರಿ ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಿರಿ. ನಿಮಗೆ ಯಶಸ್ಸು ಪ್ರಾಪ್ತಿಯಾಗಲೂಬಹುದು"** (24-31)

ಇನ್ನೊಂದು ಕಡೆ ಅಲ್ಲಾಹನು ಹೇಳುತ್ತಾನೆ,

يَا يُّهَا الَّذِيْنَ آمَنُوا تُوبُوا اِلَى اللهِ تَوْبَةً نَّصُوحًا

**"ಸತ್ಯ ವಿಶ್ವಾಸಿಗಳೇ! ಅಲ್ಲಾಹನೊಡನೆ ಪಶ್ಚಾತ್ತಾಪ ಪಡಿರಿ. ನಿಷ್ಕಳಂಕವಾದ ಪಶ್ಚಾತ್ತಾಪ"**(66-8)

ತೌಬಾ ಅಥವಾ ಪಶ್ಚಾತ್ತಾಪವು ಅತ್ಯಾವಶ್ಯಕವಾಗಿದೆ. ಮುಸಲ್ಮಾನರು ಸದಾ ಇದನ್ನು ಅವಲಂಬಿಸಿಕೊಂಡಿರಬೇಕು. ಪ್ರವಾದಿ(ಸ) ಹೇಳುವಂತೆ ತೌಬಾ ಅಥವಾ ಪಶ್ಚಾತ್ತಾಪವು ಹಿಂದಿನ ಎಲ್ಲ ಪಾಪಗಳನ್ನು ಅಳಿಸಿ ಹಾಕುತ್ತದೆ. ಆದ್ದರಿಂದ ತೌಬಾವನ್ನು ಸದಾ ಅವಲಂಬಿಸಿಕೊಂಡಿರಬೇಕು.

ಯಾವುದಾದರೂ ವಿಷ ಘಳಿಗೆಯಲ್ಲಿ ನಿಮ್ಮಿಂದ ಯಾವುದಾದರೂ ತಪ್ಪು ಸಂಭವಿಸಿ ಬಿಟ್ಟರೆ ತಕ್ಷಣ ತೌಬಾ ಮಾಡಿಕೊಂಡು ತಪ್ಪನ್ನು ತಿದ್ದಿಕೊಳ್ಳುವ ಸಂಕಲ್ಪ ಕೈಗೊಳ್ಳಬೇಕಾಗಿದೆ.

**ಲೌಕಿಕ ತಾತ್ಪರ್ಯಕ್ಕೆ ವಿನಿಯೋಗಿಸುವಷ್ಟು ಸಮಯವನ್ನು ಧಾರ್ಮಿಕ ವಿಧ್ಯೆಗಳಿಸುವುದಕ್ಕೂ ಉಪಯೋಗಿಸಿಕೊಳ್ಳಿರಿ :**

ಹೇ ಅಲ್ಲಾಹನ ದಾಸರೇ! ನೀವು ನಿಮ್ಮ ಧರ್ಮವನ್ನು ಅರಿತುಕೊಳ್ಳುವ ವಿದ್ಯಾರ್ಥಿಗಳಾಗಿರಿ. ನಿಮ್ಮ ಪಾರತ್ರಿಕ ಜೀವನವನ್ನು ಬೆಳಗುವ ಸಾಧನವನ್ನು ಸಂಪಾದಿಸಿಕೊಳ್ಳಿರಿ. ನಿಮ್ಮ ಗಮನವನ್ನು ಕೇವಲ ಐಕಿಕ ತಾತ್ಪರ್ಯಕ್ಕಾಗಿ ವಿನಿಯೋಗಿಸದಿರಿ. ಅದಕ್ಕಾಗಿ ಒಂದಂಶವನ್ನು ನಿಶ್ಚಯಿಸಿಟ್ಟು ಧಾರ್ಮಿಕ ಜ್ಞಾನವನ್ನು ಗಳಿಸಲು, ಅದನ್ನು ಪ್ರಾಯೋಗಿಕಗೊಳಿಸಲು ಕುರ್‌ಆನ್ ಮತ್ತು ಹದೀಸ್‌ನಲ್ಲಿ ಮನಸ್ಸನ್ನು ಕೇಂದ್ರಿಕರಿಸಲು, ಉಪನ್ಯಾಸ ಕಾರ್ಯಕ್ರಮಗಳಲ್ಲಿ ಹಾಜರಾಗಲು, ಸಜ್ಜನರ ಸಹವಾಸ ನಡೆಸಲು ಅತ್ಯಂತ ಹೆಚ್ಚು ಸಮಯವನ್ನು ವಿನಿಯೋಗಿಸಿರಿ. ನೀವು ಅದಕ್ಕೇ ಆದ್ಯತೆ ನೀಡಿದರೆ ಅದು ನಿಮ್ಮ ಸತ್ಯ ಸಾಕ್ಷ್ಯಕ್ಕೆ ಪುರಾವೆ ಒದಗಿಸುವುದು.

## ಶಿರ್ಕ್‌ನ ದ್ವಿತೀಯ ರೂಪ : ಸಣ್ಣ ಶಿರ್ಕ್

ಶಿರ್ಕ್‌ನ ಎರಡನೇ ರೂಪ ಶಿರ್ಕುಲ್ ಅಸ್ಗರ್ (ಸಣ್ಣಶಿರ್ಕ್)ಆಗಿದೆ. ಉದಾಹರಣೆಗೆ ರಿಯಾ ಅಥವಾ ತೋರಿಕೆ. ಪ್ರತಿಷ್ಠೆಯನ್ನು ಮೆರೆಯಲು, ಜನರಿಂದ ಹೊಗಳಿಸಿಕೊಳ್ಳಲಿಕ್ಕಾಗಿ ಪ್ರವರ್ತಿಸುವುದು ಇದರಲ್ಲಿ ಒಳಪಡುತ್ತದೆ. ಅದೇ ರೀತಿ ಒಂದು ಕಾರ್ಯ ಸಾಧಿತವಾದಾಗ ಅಲ್ಲಾಹನ ಇಚ್ಛೆ ಮತ್ತು ಇಂತಿಂತಹಾ (ವಲೀ-ಫೀರ್-ತಂಗಳ್)ವ್ಯಕ್ತಿಯ ಇಚ್ಛೆ ಪ್ರಕಾರ ವೆಂದು

ಹೇಳುವುದು, ಅಲ್ಲಾಹೇತರರ ಹೆಸರಿನಲ್ಲಿ ಆಣೆ ಹಾಕುವುದು (ಪ್ರಮಾಣ ಮಾಡುವುದು) ಉದಾ: ನೆಬಿಯ ಆಣೆ, ಕಅಬಾದ ಆಣೆ ಇತ್ಯಾದಿ. ಇವೆಲ್ಲವೂ ಶಿರ್ಕುಲ್ ಅಸ್ಗರ್‌ನಲ್ಲಿ ಒಳಪಡುತ್ತದೆ. ಆದ್ದರಿಂದ ಇಂತಹಾ ವಿಷಯಗಳಿಂದ ಸಂಪೂರ್ಣವಾಗಿ ದೂರವಿರಬೇಕು.

ಶಿರ್ಕುಲ್ ಅಸ್ಗರನ್ನು ನಿಷೇಧಿಸುವ ಪ್ರವಾದಿ ವಚನ:

**قَالَ النَّبِيُّ ﷺ: لَمَّاقَالَ لَهُ رَجُلٌ:**

**مَاشَاءَ اللّٰهُ وَشِئْتَ: اَجَعَلْتَنِيْ لِلّٰهِ نِدًّا؟. مَاشَاءَ اللّٰهُ وَحْدَهُ.(النَّسَائِي)**

ಪ್ರವಾದಿ (ಸ)ಹೇಳಿದರು, ಒಬ್ಬ ವ್ಯಕ್ತಿ ಪ್ರವಾದಿ(ಸ)ರೊಂದಿಗೆ ಹೇಳಿದರು,

**"ಅಲ್ಲಾಹನ ಇಚ್ಛೆ ಮತ್ತು ನಿಮ್ಮ ಇಚ್ಛೆ ಪ್ರಕಾರ...." ಅದನ್ನು ಆಲಿಸಿದ ಪ್ರವಾದಿ(ಸ) ಹೇಳಿದರು "ನೀವು ನನ್ನನ್ನು ಅಲ್ಲಾಹನಿಗೆ ಸಹಭಾಗಿಯಾಗಿ ನಿಶ್ಚಯಿಸಿ ಬಿಟ್ಟಿರಾ...?" ಯಾವುದನ್ನು ಅಲ್ಲಾಹನು ಇಚ್ಛಿಸುತ್ತಾನೋ ಅದೇ ಆಗುತ್ತದೆ." (ನಸಾಈ)**

**وَقَالَ النَّبِيُّ ﷺ: لَاتَقُوْلُوْامَاشَاءَ اللّٰهُ وَشَاءَ فُلَانٌ وَلٰكِنْ قُوْلُوا: مَاشَاءَ اللّٰهُ ثُمَّ شَاءَ فُلَانٌ (ابوداؤد)**

**ಪ್ರವಾದಿ (ಸ)ಹೇಳಿದರು"ನೀವು ಅಲ್ಲಾಹನ ಇಚ್ಛೆ ಮತ್ತು ಇಂತಿಂತವರ ಇಚ್ಛೆ ಪ್ರಕಾರವೆಂದು ಹೇಳಬೇಡಿರಿ. ಅಲ್ಲಾಹನ ಇಚ್ಛೆಯ ನಂತರ ಇಂತಿಂತವರ ಬಯುಸಿದಂತೆ ಎಂದು ಹೇಳಿರಿ(ಅಬೂದಾವೂದ್)**

**وَقَالَ النَّبِيُّ ﷺ: مَنْ كَانَ حَالِفًا فَلْيَحْلِفْ بِاللّٰهِ اَوْلِيَصْمُتْ (بخاری ومسلم)**

ಪ್ರವಾದಿ (ಸ) ಹೇಳಿದರು,

**ಯಾರಾದರೂ ಪ್ರಮಾಣ ಮಾಡಬೇಕಾದರೆ (ಆಣೆಹಾಕುವುದು) ಅಲ್ಲಾಹನ ಹೆಸರೆತ್ತಿ ಪ್ರಮಾಣ ಮಾಡಲಿ ಅಥವಾ ಸುಮ್ಮನಿರಲಿ** (ಬುಖಾರಿ-ಮುಸ್ಲಿಮ್)

**وَقَالَ النَّبِيُّ ﷺ: لَا تَحْلِفُوْا بِآبَاءِ كُمْ وَلَا بِاُمَّهَاتِكُمْ وَلَا بِالْاَنْدَادِ وَلَاتَحْلِفُوْا بِا للّٰهِ اِلَّا وَاَنْتُمْ صَادِقُوْنَ. (ابوداؤد)**

**ಪ್ರವಾದಿ (ಸ) ಹೇಳಿದರು,. ನೀವು ನಿಮ್ಮ ತಂದೆ, ತಾಯಿ, ಸೊತ್ತು ಕುಟುಂಬಾದಿಗಳು ಅಥವಾ ಅಲ್ಲಾಹೇತರ ಆರಾಧ್ಯರ ಹೆಸರಲ್ಲಿ ಪ್ರಮಾಣ ಮಾಡದಿರಿ. ಬದಲಾಗಿ ನೀವು ಸತ್ಯವಂತರಾಗಿದ್ದರೆ**

**ಕೇವಲ ಅಲ್ಲಾಹನ ಹೆಸರಲ್ಲಿ ಪ್ರಮಾಣ ಮಾಡಿರಿ (ಅಬೂದಾವೂದ್)**

**وَقَالَ النَّبِيُّ ﷺ: مَنْ حَلَفَ بِغَيْرِ اللّٰهِ فَقَدْ اَشْرَكَ (ابوداؤد)**

**ಪ್ರವಾದಿ (ಸ) ಹೇಳಿದರು, ಯಾರು ಅಲ್ಲಾಹೇತರರ ಆಣೆ ಹಾಕುತ್ತಾರೋ (ಅಲ್ಲಾಹೇತರರ ಹೆಸರಲ್ಲಿ ಪ್ರಮಾಣ ಮಾಡುತ್ತಾರೋ) ಅವರು ಶಿರ್ಕ್ ಪ್ರವರ್ತಿಸಿದರು" (ಅಬೂದಾವೂದ್)**

ಈ ಕುರಿತಾಗಿ ಪ್ರವಾದಿ (ಸ)ರವರ ಹಲವಾರು ಹದೀಸ್‌ಗಳು ಸಹೀಹ್ ಆಗಿ ಉಲ್ಲೇಖಗೊಂಡಿವೆ. ಆ ಪೈಕಿ ಒಂದು ಈ ರೀತಿ ಇದೆ.

**اَخْوَفُ مَا اَخَافُ عَلَيْكُمُ الشِّرْكُ الْاَصْغَرُ، فَسُئِلَ عَنْهُ، فَقَالَ: اَلرِّيَاءُ (احمد)**

**"ನನಗೆ ನಿಮ್ಮ ಕುರಿತು ಹೆಚ್ಚು ಭಯವಿರುವುದು ಶಿರ್ಕುಲ್ ಅಸ್ಗರ್‌ಗಳ (ಸಣ್ಣ ಶಿರ್ಕ್) ಕುರಿತಾಗಿದೆ" ಆ ಕುರಿತು ವಿಚಾರಿಸಲಾದಾಗ ಅವರು (ಸ) ಹೇಳಿದರು ಉದಾಹರಣೆಗೆ ತೋರಿಕೆ ಅಥವಾ ಪ್ರದರ್ಶನ ಪ್ರಿಯತೆ"** (ಅಹ್ಮದ್)

ಕೆಲವೊಮ್ಮೆ ಸಣ್ಣ ತಪ್ಪುಗಳು ದೊಡ್ಡ ಪ್ರಮಾದಗಳಿಗೆ ಕಾರಣವಾಗುವಂತೆ ಸಣ್ಣ-ಸಣ್ಣ ಶಿರ್ಕ್ ದೊಡ್ಡ ಶಿರ್ಕ್ ಪ್ರವರ್ತಿಸಲು ಕಾರಣವೆನಿಸುತ್ತದೆ. ತೋರಿಕೆ ಅಥವಾ ಆಡಂಬರ,ಪ್ರದರ್ಶನ ಪ್ರಿಯತೆಯು ಕೆಲವೊಮ್ಮೆ ದೊಡ್ಡ ಶಿರ್ಕ್‌ನಲ್ಲಿ ಸೇರಿಕೊಂಡು ಬಿಡುತ್ತದೆ. ಅದು ಹೆಚ್ಚಾಗಿ ಧಾರ್ಮಿಕ ಆಚರಣೆ. ಅನುಷ್ಠಾನಗಳನ್ನು ಇನ್ನೊಬ್ಬರು ನೋಡಲೆಂಬಂತೆ ಮಾಡಿದಾಗ ಸಂಭವಿಸುತ್ತದೆ. ವಿಶ್ವಾಸ ಮತ್ತು ಧರ್ಮದ ಮೇಲೆ ಪ್ರೀತಿ ಇಲ್ಲದೆ, ಕೇವಲ ಕಾಟಾಚಾರಕ್ಕೆ, ಪರಿಸ್ಥಿತಿ ಮತ್ತು ವಾತಾವರಣಕ್ಕೆ ಹೊಂದಿಕೊಂಡು, ಅನಿವಾರ್ಯತೆಗೆ ಕಟ್ಟುಬಿದ್ದು ಅವುಗಳನ್ನು ನಿರ್ವಹಿಸುವಾಗ ಅವನು ದೊಡ್ಡ ಕುಫ್ರ್‌ನಲ್ಲಿ ಶಾಮಿಲಾಗಿ ಬಿಡುತ್ತಾನೆ.

ಅದೇ ಪ್ರಕಾರ ಅಲ್ಲಾಹನಿಗೆ ಹೊರತಾದ ಇತರರ ಹೆಸರಲ್ಲಿ ಪ್ರಮಾಣ ಮಾಡುವಾಗ ಅಥವಾ ಆಣೆ ಹಾಕುವಾಗ, ಅಲ್ಲಾಹನ ಶಕ್ತಿ ಸಾಮರ್ಥ್ಯಗಳು ಇತರರಿಗಿದೆ ಎಂದು ಭಾವಿಸಿದಾಗ ಅಥವಾ ಅವರು ಅಗೋಚರ ಸಂಗತಿಗಳನ್ನು ಅರಿಯುತ್ತಾರೆಂದು ತಿಳಿದರೆ, ಅಥವಾ ಅವರನ್ನು ಅಲ್ಲಾಹ್‌ನೊಂದಿಗೆ ಸಮೀಕರಿಸಿದರೆ ಆ ಕಾರಣದಿಂದ ಅವನು ದೊಡ್ಡ ಶಿರ್ಕ್ ಪ್ರವರ್ತಿಸಿದವನಾಗಿ ಪರಿಗಣಿಸಲ್ಪಡುತ್ತಾನೆ.

ಒಂದೊಮ್ಮೆ ಬಾಯಿ ಮೂಲಕ ಅಲ್ಲಾಹೇತರರ ಅಥವಾ ವ್ಯಕ್ತಿಗಳನ್ನು ಉಲ್ಲೇಖಿಸಿ ಆಣೆ ಹಾಕಿದರೆ (ಕಅಬಾದ ಆಣೆ, ಪ್ರವಾದಿ(ಸ)ರ ಆಣೆ ಇತ್ಯಾದಿ)ಅವನು ಸಣ್ಣ ಶಿರ್ಕ್ ಪ್ರವರ್ತಿಸಿದ ಮುಶ್ರಿಕರಲ್ಲಿಗಣಿಸಲ್ಪಡುತ್ತಾನೆ.

ಅಲ್ಲಾಹನೊಂದಿಗೆ ನನ್ನ ಪ್ರಾರ್ಥನೆ ಏನೆಂದರೆ, ಅವನು ನಮಗೂ-ನಿಮಗೂ ಅವನ ಧರ್ಮದ ನೈಜ ಅರಿವನ್ನು ನೀಡಿ ಅನುಗ್ರಹಿಸಲಿ. ಅವನ ಸದ್ಧರ್ಮದಲ್ಲಿ ನಮ್ಮ ಪಾದಗಳನ್ನು ಬಲಪಡಿಸಲಿ. ಧರ್ಮದಲ್ಲಿ ನಿಷ್ಠೆ ಉಳ್ಳವರಾಗಿ ಮಾಡಲಿ. ನಮ್ಮೆಲ್ಲರನ್ನೂ ನಮ್ಮ ಶರೀರದ ದುಷ್ಪ್ರೇರಣೆಗಳಿಂದ, ಪ್ರವರ್ತನೆಗಳ ಕೇಡಿನಿಂದ, ಪಿಶಾಚಿಯ ಉದ್ಬೋಧನೆಗಳಿಂದ, ಪಥ ಭ್ರಷ್ಟತೆಯಿಂದ ರಕ್ಷಿಸಲಿ. ಅವನ ಕ್ಷಮೆ ಕರುಣೆ ಅನುಗ್ರಹಪೂರ್ಣ ದೃಷ್ಟಿಯನ್ನೇ ನಮ್ಮ ಮೇಲೆ ಶಾಶ್ವತಗೊಳಿಸಲಿ. ನಿಶ್ಚಯವಾಗಿಯೂ ಅವನು ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆಗಿದ್ದಾನೆ.

ಅಲ್ಲಾಹನು ಅವನ ದಾಸ ಮತ್ತು ಸಂದೇಶವಾಹಕರು, ನಮ್ಮ ಮಾರ್ಗದರ್ಶಕರೂ ನೇತಾರರೂ ಆದ ಮುಹಮ್ಮದ್(ಸ) ರವರ ಮೇಲೆ ಶಾಂತಿ, ಕರುಣೆ ಮತ್ತು ಸಂಮೃದ್ಧಿಯನ್ನು ವರ್ಷಿಸಲಿ. ಅವರ ಸಹವರ್ತಿಗಳು ಮತ್ತು ಅಂತಿಮ ದಿನದ ತನಕ ಅವರನ್ನು ಆತಾರ್ಥವಾಗಿ ಅನುಸರಿಸುವವರ ಮೇಲೂ ವರ್ಷಿಸುತ್ತಿರಲಿ.

وصلى اللهُ وسلم وبارک على عبده ورسوله نبينامحمد وعلى
آله واصحابه واتباعه باحسان الىٰ يوم الدين.

## ಪ್ರವಾದಿಗಳು ಬೋಧಿಸಿದ ತೌಹೀದ್ ಮತ್ತು ಅದಕ್ಕೆ ವಿರುದ್ಧವಾದ ಪ್ರವರ್ತಿ ಅಥವಾ ಕುಫ್ರ್ ಮತ್ತು ಶಿರ್ಕ್

ಸರ್ವಲೋಕಗಳ ಪಾಲಕ ಪ್ರಭು ಅಲ್ಲಾಹನಿಗೆ ಸರ್ವಸ್ತುತಿ. ಅವನಿಗೆ ಭಯಪಟ್ಟು ಸತ್ಯಸಂಧರಾಗಿ ಜೀವಿಸಿದ ಸರ್ವ ಸಜ್ಜನರಿಗೂ ಅಭಿನಂದನೆಗಳು. ಅವರ ಅಂತಿಮ ನೆಲೆಯು ಸ್ವರ್ಗವಾಗಿರುವುದು. ಅವನ ಶಾಂತಿ, ಕೃಪೆ, ಅನುಗ್ರಹಗಳು ಗತ ಪ್ರವಾದಿಗಳ ಮೇಲೆ ಅವರೆಲ್ಲರ ಕುಟುಂಬಗಳ ಮೇಲೆ ಮತ್ತು ಸಜ್ಜನರಾದ ಸರ್ವ ಸತ್ಯವಿಶ್ವಾಸಿಗಳ ಮೇಲೆ ವರ್ಷಿಸುತ್ತಿರಲಿ.

ಸ್ತುತಿ-ಸ್ತೋತ್ರಗಳ ನಂತರ

### ಎಲ್ಲಾ ಜ್ಞಾನಕ್ಕಿಂತಲೂ ಮಿಗಿಲಾದುದು ತೌಹೀದಿನ ಜ್ಞಾನವಾಗಿದೆ :

ಸರ್ವಶಕ್ತನಾದ ಅಲ್ಲಾಹನನ್ನು ಏಕೈಕ ಆರಾಧ್ಯನೆಂದು ಅಂಗೀಕರಿಸುವುದು ಅವನ ಮೇಲೆ ಮತ್ತು ಅವರ ಸಂದೇಶವಾಹಕರ (ಸ) ಮೇಲೆ ವಿಶ್ವಾಸವಿರಿಸುವುದು. ಇದು ಇತರ ಎಲ್ಲಾ ಕಡ್ಡಾಯ ಕರ್ಮಗಳಿಗಿಂತಲೂ ಉನ್ನತವಾದುದಾಗಿದೆ. ಅದೇ ಪ್ರಕಾರ ಈ ಕುರಿತಾದ ಜ್ಞಾನ ಸಂಪಾದನೆ ಮಾಡುವುದೇ ವಾಸ್ತವದಲ್ಲಿ ಇತರ ಎಲ್ಲಾ ಜ್ಞಾನಾರ್ಜನಗಳಿಗಿಂತಲೂ ಶ್ರೇಷ್ಠವಾದುದಾಗಿದೆ.

ಈ ಒಂದು ಮೂಲಭೂತ ಸಂಗತಿಯನ್ನು ವಿವರಿಸುವ ಅವಶ್ಯಕತೆಯನ್ನು ಮನಗಂಡುಕೊಂಡು ಈ ಕೃತಿಯಲ್ಲಿ ಅದಕ್ಕೆ ಕಾರ್ಯರೂಪವನ್ನು ಕೊಡಲು ತೀರ್ಮಾನಿಸಿದ್ದೇನೆ. ಈ ವಿಷಯವು ಅತ್ಯಂತ ಮಹತ್ವಪೂರ್ಣವೂ, ಗಮನಾರ್ಹವೂ ಆಗಿದೆ.

ಅಲ್ಲಾಹನು ನಮಗೆಲ್ಲರಿಗೂ ಮಾತು ಮತ್ತು ಕೃತಿಯಲ್ಲಿ ನ್ಯಾಯ ಪಾಲನೆ ಮಾಡುವಂತಹಾ ಭಾಗ್ಯವನ್ನು ಕರುಣಿಸಲಿ. ಪಾಪ ಕಾರ್ಯಗಳಿಂದ ನಮ್ಮನ್ನು ಸಂರಕ್ಷಿಸಲಿ.

### ಧಾರ್ಮಿಕ ಕಾರ್ಯಗಳಲ್ಲಿ ಪ್ರಾಮುಖ್ಯವಾದುದು ಏಕನಿಷ್ಠ ಆರಾಧನೆಯಾಗಿದೆ. ಇದುವೇ ಸರ್ವ ಪ್ರವಾದಿಗಳ ಆದ್ಯ ಪ್ರವರ್ತನೆಯೂ ಆಗಿತ್ತು

ಸರ್ವಶಕ್ತನಾದ ಅಲ್ಲಾಹನಿಂದ ನೆರವನ್ನು ಯಾಚಿಸಿಕೊಂಡು ಸರ್ವ ಪ್ರಥಮವಾಗಿ ನನಗೆ ತಿಳಿಯಪಡಿಸಲಿರುವುದೂ ಅದನ್ನೇ ಆಗಿದೆ. ದೀನಿನ ಎಲ್ಲಾ ಕರ್ಮಗಳಿಗಿಂತಲೂ ಪ್ರಧಾನವಾದುದು ಅಲ್ಲಾಹನನ್ನು ಏಕನೆಂದು ಅಂಗೀಕರಿಸುವುದಾಗಿದೆ ಮತ್ತು ಎಲ್ಲಾ ರೀತಿಯ ಆರಾಧನಾ ಕರ್ಮಗಳನ್ನು ಅವನಿಗಾಗಿ ಮೀಸಲಿರಿಸುವುದಾಗಿದೆ. ಇದುವೇ ಪ್ರವಾದಿಗಳ ಸಂದೇಶ ಪ್ರಚಾರದ ತಿರುಳಾಗಿದೆ. ಇದೇ ಸಂಗತಿಯನ್ನು ಸರ್ವ ಚರಾಚರಗಳ ಪಾಲಕ ಪ್ರಭುವಾದ ಅಲ್ಲಾಹನು ತನ್ನ ಪವಿತ್ರ ಗ್ರಂಥದಲ್ಲಿ ಬಹಿರಂಗಪಡಿಸುತ್ತಾನೆ. ವಾಸ್ತವದಲ್ಲಿ ಅವನು ಸತ್ಯವಂತನೇ ಆಗಿದ್ದಾನೆ.

**ಅಲ್ಲಾಹು ತನ್ನ ಪ್ರವಾದಿಗಳ ಕುರಿತು ಹೀಗೆ ಹೇಳುತ್ತಾನೆ,**

وَلَقَدْ بَعَثْنَا فِي كُلِّ أُمَّةٍ رَّسُولاً أَنِ اعْبُدُوا اللَّهَ
وَاجْتَنِبُوا الطَّاغُوتَ (سورة النحل، الآية ٣٦)

**"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕನನ್ನು ಕಳುಹಿಸಿದೆವು ಮತ್ತು ಅಲ್ಲಾಹನ ಆರಾಧನೆ ಮಾಡಿರಿ ಮತ್ತು "ತಾಗೂತ್"ನ ಆರಾಧನೆಯಿಂದ ದೂರವಿರಿ ಎಂದು ಅವರ ಮೂಲಕ ಎಚ್ಚರಿಕೆ ನೀಡಿದೆವು". (16-36)**

ಸರ್ವಶಕ್ತನಾದ ಅಲ್ಲಾಹನು ಈ ವಚನದಲ್ಲಿ ಅವನು ಪ್ರತಿಯೊಂದು ಜನಾಂಗ ಅಥವಾ ಸಮೂಹದ ಕಡೆಗೂ ಪ್ರವಾದಿಗಳನ್ನು ಕಳುಹಿಸಿದ್ದಾನೆಂದೂ, ಪ್ರತಿಯೊಬ್ಬ ಪ್ರವಾದಿಯೂ ಅವರ ಸಮುದಾಯಕ್ಕೆ ನೀವು ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂದೂ, ಅಲ್ಲಾಹೇತರ ವ್ಯಕ್ತಿ ಅಥವಾ ಶಕ್ತಿಗಳ ಆರಾಧನೆಯನ್ನು ತೊರೆಯಬೇಕೆಂಬ ಸಂದೇಶವನ್ನು ನೀಡಿದ್ದಾರೆನ್ನುವುದನ್ನೂ ತೆರೆದು ಹೇಳುತ್ತಾನೆ. ಸರ್ವ ಪ್ರವಾದಿಗಳೂ ಜನರಿಗೆ ಈ ಸಂದೇಶವನ್ನು ನೀಡಿದ್ದರು. ಅವರು ತಮ್ಮ ತಮ್ಮ ಸಮುದಾಯದ ಮುಂದೆ ಗಂಟಲು ಬಿರಿಯುವಂತೆ ಕೂಗಿ ಹೇಳಿದ ಮಾತು

"ಅಲ್ಲಾಹನನ್ನು ಆರಾಧಿಸಿರಿ.
ಅಲ್ಲಾಹತೇರ ಆರಾಧನೆಗಳಿಂದ ದೂರವಿರಿ" ಎನ್ನುವುದಾಗಿತ್ತು.

## ಪ್ರವಾದಿಗಳು ಮತ್ತು ಅವರ ಸಮುದಾಯದ ನಡುವಿನ ಸಂಘರ್ಷಕ್ಕೆ ಏಕದೇವನಿಷ್ಠೆ (ತೌಹೀದ್)ಯೇ ಕಾರಣವಾಗಿತ್ತು :

ಮೇಲಿನ ಸೂಕ್ತದ ತಿರುಳು ಅಲ್ಲಾಹನನ್ನು ಮಾತ್ರ ಆರಾಧನಾರ್ಹವೆಂದು ಪರಿಗಣಿಸಬೇಕು ಎನ್ನುವುದಾಗಿದೆ. ಎಲ್ಲಾ ಪ್ರವಾದಿಗಳು ಮತ್ತು ಅವರ ಸಮೂಹದ ಮಧ್ಯೆ ಉಂಟಾಗಿದ್ದ ಸಂಘರ್ಷಕ್ಕೆ ಮುಖ್ಯ ಕಾರಣವೇ ಇದಾಗಿತ್ತು". ಅನ್ಯಥಾ ಎಲ್ಲಾ ಸಮೂಹದಲ್ಲೂ ಅಲ್ಲಾಹನು ಪರಿಪಾಲಕನೆಂದೂ, ಅವನೇ ಸೃಷ್ಟಿಕರ್ತನೆಂದೂ, ಅನ್ನಾಹಾರಗಳನ್ನು ಅಲ್ಲಾಹನೇ ನೀಡುತ್ತಾನೆಂಬ ನಂಬಿಕೆಯು ನೆಲೆಗೊಂಡಿತ್ತು. ಮಾತ್ರವಲ್ಲದೆ, ಅವರು ಅಲ್ಲಾಹನ ಗುಣ-ನಾಮ ವಿಶೇಷಣಗಳನ್ನು ಅರಿತುಕೊಂಡಿದ್ದರು. ಆದರೆ ಮೂಸಾ (ಅ)ರಿಂದ ಈ ತನಕದ ಜನರೊಳಗಿನ ವಿರೋಧ, ಜಗಳವೆಲ್ಲವೂ ಆರಾಧನೆಗಳೆಲ್ಲವನ್ನೂ ಅಲ್ಲಾಹನೊಬ್ಬನಿಗೆ ಮೀಸಲಾಗಿಸಬೇಕೆಂಬ ವಿಷಯದ ಕುರಿತಾಗಿದೆ. ಪ್ರತಿಯೊಬ್ಬ ಪ್ರವಾದಿಯೂ ಅವರ ಜನಾಂಗ ಅಥವಾ ಸಮೂಹಕ್ಕೆ ಹೇಳಿದ್ದು, ಆರಾಧನೆಗಳನ್ನು ಅಲ್ಲಾಹನಿಗಾಗಿ ಮಾತ್ರ ಸೀಮಿತಗೊಳಿಸಿ, ಅವನೊಬ್ಬನನ್ನು ಮಾತ್ರ ಅವಲಂಬಿಸಿಕೊಂಡಿರಿ. ಅಲ್ಲಾಹನ ಹೊರತು ಇನ್ನಾರನ್ನೂ ಅವಲಂಬಿಸಿಕೊಳ್ಳಬೇಡಿ ಎಂದಾಗಿತ್ತು. ಆದರೆ ಪ್ರವಾದಿಗಳ ಶತ್ರುಗಳು "ನಾವು ಹಾಗೆ ಮಾಡಲಾರೆವು. ನಾವು ಅಲ್ಲಾಹನನ್ನೂ ಆರಾಧಿಸುತ್ತೇವೆ. ಅದರೊಂದಿಗೆ ಇತರರನ್ನೂ ಆರಾಧಿಸುತ್ತೇವೆ. ನಮ್ಮ ಆರಾಧನೆಯನ್ನು ನಾವು ಅಲ್ಲಾಹನೊಬ್ಬನಿಗೆ ಸೀಮಿತಗೊಳಿಸಲಾರೆವು" ಎಂದು ಹೇಳುತ್ತಿದ್ದರು.

ಇದೇ ಒಂದು ವಿಷಯದ ಕುರಿತು ಪ್ರವಾದಿಗಳು ತಮ್ಮ ಸಮುದಾಯದ ವಿರೋಧ ಕಟ್ಟಿಕೊಳ್ಳಬೇಕಾಗಿತ್ತು. ಆರಾಧನೆಗಳನ್ನು ಅಲ್ಲಾಹನಿಗೂ-ಇತರರಿಗೂ ಹಂಚುವ ವಿಧಾನ ಪ್ರವಾದಿಗಳ ಉಪದೇಶಕ್ಕೆ ವಿರುದ್ಧವಾದುದಾಗಿದೆ. ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂಬ ಸಂದೇಶ ಅದು ಅವರ ಸಮುದಾಯಕ್ಕೆ ಅಪಥ್ಯವಾಗಿತ್ತು. ಈ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಮಾತ್ರ ಅವರೊಳಗೆ ನಿರಂತರ ಚರ್ಚೆ, ಅಸಹಿಷ್ಣುತೆ, ಜಗಳ, ಸಂಘರ್ಷ ನಡೆಯುತ್ತಿತ್ತು.

ಜನರು ಅವರ ಎಲ್ಲಾ ಆರಾಧನಾ ಕರ್ಮಗಳನ್ನು ಅಲ್ಲಾಹನಿಗೆ ಮಾತ್ರ ಅರ್ಪಿಸಬೇಕೆಂಬ ಸಂದೇಶವನ್ನು ಪ್ರಚರಿಸಲು ಅಲ್ಲಾಹು ಜನರಿಂದಲೇ ಪ್ರವಾದಿಗಳನ್ನು ಆರಿಸಿ ನಿಯೋಗಿಸಿದನು. ಅಲ್ಲಾಹೇತರ ಶಕ್ತಿಗಳನ್ನು ಅವಲಂಬಿಸದೆ ಅವನನ್ನೇ ಸಕಲ ಜಗದೊಡೆಯನೆಂದೂ, ಸರ್ವ ವಸ್ತುಗಳನ್ನು ನಿಯಂತ್ರಿಸುವವನೆಂದೂ, ಜನನ ಮತ್ತು ಮರಣ ಅವನ ಇಚ್ಛೆಗೆ ಅಧೀನವಾಗಿರುವುದೆಂದೂ, ಆಕಾಶದಿಂದ ಮಳೆಯನ್ನು ಸುರಿಸಿ ಭೂಮಿಯಲ್ಲಿ ದವಸ ಧಾನ್ಯಗಳನ್ನು ಬೆಳೆಸಿ ಜನರಿಗೆ ಅನ್ನಾಹಾರವನ್ನು ಅವನೇ ಒದಗಿಸುತ್ತಾನೆಂದೂ, ಸರ್ವ ಜನರ ಅಹವಾಲುಗಳನ್ನು ಅರಿಯುವವನೂ, ಸರ್ವ ಚರಾಚರಗಳ ಪಾಲಕ ಪ್ರಭುವೂ ಅವನೇ ಆಗಿರುವನೆಂದೂ, ಜನರಿಗೆ ಸುಲಭ ರೀತಿಯಲ್ಲಿ ಮನವರಿಕೆ ಮಾಡಿಕೊಡುವ ಹೊಣೆಗಾರಿಕೆಯನ್ನೂ ಅಲ್ಲಾಹು ಪ್ರವಾದಿಗಳಿಗೆ ವಹಿಸಿಕೊಟ್ಟನು.

ಇದೇ ಕಾರಣದಿಂದ ಭೂಮಿಯ ಮೇಲೆ ನಿಯುಕ್ತರಾದ ಸರ್ವ ಪ್ರವಾದಿಗಳೂ ತಮ್ಮ ಸಮೂಹಗಳಿಗೆ ಆರಾಧನಾರ್ಹನು ಕೇವಲ ಅಲ್ಲಾಹನು ಮಾತ್ರವಾಗಿದ್ದಾನೆಂದೂ, ಆದ್ದರಿಂದ ಸರ್ವ ಆರಾಧನಾ ಕರ್ಮಗಳನ್ನು ಅವನಿಗೆ ಅರ್ಪಿಸಬೇಕೆಂದೂ ಅವನ ಹೊರತಾದ ಯಾವುದೇ ವ್ಯಕ್ತಿ ಅಥವಾ ಶಕ್ತಿಗಳಿಗೆ ಆರಾಧನೆಯಲ್ಲಿ ಭಾಗ ಕಲ್ಪಿಸಬಾರದೆಂದೂ ಉಪದೇಶಿಸಿದರು. ಅವರ ಉಪದೇಶವು ಈ ಪವಿತ್ರ ವಚನದಲ್ಲಿ ಅಧಿಷ್ಠಿತಗೊಂಡಿತ್ತು.

"أَنِ اعْبُدُوا
اللّٰـهَ وَاجْتَنِبُوا الطَّـاغُوْتَ (سورة النحل، الآية ٣٦)

**"ನೀವು ಅಲ್ಲಾಹನನ್ನು ಮಾತ್ರ ಆರಾಧಿಸಿರಿ. ಅಲ್ಲಾಹನಿಗೆ ಹೊರತಾದ "ತಾಗೂತ್"ಗಳ ಆರಾಧನೆಯಿಂದ ದೂರ ಸರಿಯಿರಿ".**

**ಅಬ್ದುಲ್ಲಾಬಿನ್ ಅಬ್ಬಾಸ್ (ರ)ರವರ ಪ್ರಕಾರ ತೌಹೀದ್ :**

ಅವರು ಹೇಳುತ್ತಾರೆ, "ಆರಾಧನೆಗಳನ್ನೇ ತೌಹೀದ್ ಎಂದು ಕರೆಯಲಾಗುತ್ತದೆ. ಸರ್ವ ವಿದ್ವಾಂಸರೂ ಇದನ್ನೇ ಹೇಳಿದ್ದಾರೆ.

ಸತ್ಯನಿಷೇಧಿಗಳಾದವರು ಅಲ್ಲಾಹನನ್ನೂ ಆರಾಧಿಸುತ್ತಾರೆ. ಅಲ್ಲಾಹನೊಂದಿಗೆ ಇತರ ಶಕ್ತಿಗಳನ್ನು ಆರಾಧಿಸುತ್ತಾರೆ. ಈ ಕುರಿತು ಕುರ್‌ಆನ್ ಹೇಳುತ್ತದೆ,

وَاِذْقَالَ اِبْـرَاهِيْـمُ لِاَبِيْهِ وَقَوْمِهٖ اِنَّنِيْ بَرَآءٌ مِّمَّا تَعْبُدُوْنَ اِلَّا الَّذِيْ
فَطَرَنِيْ فَاِنَّهٗ سَيَهْدِيْنِ (سورة الزخرف، الآيتان ٢٦،٢٧)

**"ಇಬ್ರಾಹೀಮರು ತಮ್ಮ ತಂದೆಯೊಡನೆ ಹಾಗೂ ತಮ್ಮ ಜನಾಂಗದೊಡನೆ ಹೇಳಿದ್ದ ಸಂದರ್ಭವನ್ನು ಸ್ಮರಿಸಿರಿ". ನೀವು ಯಾರ ಆರಾಧನೆ ಮಾಡುತ್ತೀರೋ ಅವರೊಂದಿಗೆ ನನಗೆ ಯಾವ**

**ಸಂಬಂಧವೂ ಇಲ್ಲ. ನನಗೆ ಸಂಬಂಧವಿರುವುದು ನನ್ನ ಸೃಷ್ಟಿಸಿದವನೊಂದಿಗೆ ಮಾತ್ರ. ಅವನೇ ನನಗೆ ಮಾರ್ಗದರ್ಶನ ನೀಡುವನು".** (43 : 26, 27)

ಈ ಪ್ರಕಾರ ಇಬ್ರಾಹೀಮ್ (ಅ)ರವರು ತನ್ನ ಪಿತೃವರ್ಯರ ಸಮೇತ ತನ್ನ ಸಮುದಾಯದ ಎಲ್ಲಾ ದೇವೇತರ ಆರಾಧಕರೊಂದಿಗೂ ಸಂಬಂಧವನ್ನು ಕಡಿದುಕೊಳ್ಳುವ ಘೋಷಣೆಯನ್ನು ಮಾಡಿ ಬಿಡುತ್ತಾರೆ. ಮಾತ್ರವಲ್ಲದೆ, ಅವರ ಆರಾಧ್ಯರೊಂದಿಗೂ ಕೂಡಾ.... ಅಲ್ಲಾಹನು ಮುಂದುವರಿಸುತ್ತಾನೆ.....

وَاَعْتَزِلُكُمْ وَمَاتَدْعُوْنَ مِنْ دُوْنِ اللّٰهِ وَاَدْعُوْرَبِّیْ(سورة مريم الآية ٤٨)

**"ನಾನು ನಿಮ್ಮನ್ನು, ನೀವೆಲ್ಲರೂ ಅಲ್ಲಾಹನನ್ನು ಬಿಟ್ಟು ಕೂಗಿ ಪ್ರಾರ್ಥಿಸುತ್ತಿರುವವುಗಳೆಲ್ಲವನ್ನೂ ಬಿಟ್ಟಗಲಿ ಹೋಗುತ್ತೇನೆ".** (19/48)

ಈ ವಚನಗಳಿಂದ ಇಬ್ರಾಹೀಮ್ (ಅ)ರವರ ಕಾಲದ ಜನತೆ ಅಲ್ಲಾಹನನ್ನೂ ಆರಾಧಿಸುತ್ತಿದ್ದರೆನ್ನುವ ವಿಷಯವು ಸ್ಪಷ್ಟವಾಗುತ್ತದೆ. ಅದರೊಂದಿಗೆ ಅವರು ಇತರರಿಗೂ ಇಬಾದತ್ ಅಥವಾ ಆರಾಧನಾ ಕರ್ಮಗಳನ್ನು ಸಮರ್ಪಿಸುತ್ತಿದ್ದರು. ಈ ವಿಷಯವನ್ನು ಪುಷ್ಟೀಕರಿಸುವ ಹಲವಾರು ವಚನಗಳು ವರದಿಯಾಗಿವೆ.

**ಪ್ರವಾದಿಗಳ ಸಂದೇಶ ಪ್ರಚಾರದ ವಿಷಯ - ವಸ್ತು :**

ಈ ಎಲ್ಲಾ ವಚನಗಳಿಂದ ತಿಳಿದು ಬರುವುದೇನೆಂದರೆ, ಸರ್ವ ಪ್ರವಾದಿಗಳೂ ಅವರವರ ಸಮುದಾಯದ ಜನತೆಗೆ ಆರಾಧನೆಯನ್ನು ಕೇವಲ ಅಲ್ಲಾಹನೋರ್ವನಿಗೇ ಸಲ್ಲಿಸಬೇಕೆಂದೂ ಅವರಲ್ಲಿ ಇತರ ಯಾರನ್ನೂ ಭಾಗೀದಾರರನ್ನಾಗಿ ಮಾಡಬಾರದೆಂದೂ ಉಪದೇಶಿಸು ತ್ತಿದ್ದರು. ಅದೇ ಪ್ರಕಾರ ಅವರು ಅವನನ್ನು ಮಾತ್ರ ಕರೆದು ಪ್ರಾರ್ಥಿಸಬೇಕೆಂದೂ ನಮ್ಮೆಲ್ಲಾ ಅಹವಾಲುಗಳನ್ನು ಅವನ ಮುಂದೆಯೇ ತೋಡಿಕೊಳ್ಳಬೇಕೆಂದೂ, ನಮ್ಮ ಹರಕೆ-ನೇರ್ಚೆಗಳನ್ನೂ-ಬಲಿಕರ್ಮಗಳನ್ನೂ ಅವನ ಸಂತೃಪ್ತಿಗಾಗಿ ಮಾತ್ರ ನಡೆಸಬೇಕೆಂದೂ, ಅವನಿಗಾಗಿ ನಮಾಝ್ ನಿರ್ವಹಿಸುವುದು ಮತ್ತು ಎಲ್ಲಾ ಆರಾಧನಾ ಕರ್ಮಗಳಲ್ಲೂ ಇತರ ಯಾರನ್ನೂ ಭಾಗೀದಾರರನ್ನಾಗಿ ಮಾಡದೆ ಕೇವಲ ಅಲ್ಲಾಹನಿಗಾಗಿ ಅವುಗಳನ್ನು ಅರ್ಪಿಸುವುದು. ಏಕೆಂದರೆ ವಾಸ್ತವದಲ್ಲಿ ಅವನೇ ಆರಾಧನಾರ್ಹನಾಗಿದ್ದಾನೆ. ಅದುವೇ لا إله إلا الله ಎನ್ನುವ ಪದದ ತಿರುಳಾಗಿದೆ. ಈ ಪವಿತ್ರ ವಚನದ ತಾತ್ಪರ್ಯವು لَامَعبُودَحَقٌّ إِلَّا اللّٰهُ ಅಂದರೆ "ಆರಾಧಿಸಲ್ಪಡುವ ನೈಜ ಹಕ್ಕು ಹೊಂದಿರುವವನು ಕೇವಲ ಅಲ್ಲಾಹನೇ ಆಗಿದ್ದಾನೆ" ಎಂದಾಗಿದೆ. ಧಾರ್ಮಿಕ ವಿದ್ವಾಂಸರು ಈ ವಚನಕ್ಕೆ ಅದೇ ವ್ಯಾಖ್ಯಾನವನ್ನು ನೀಡುತ್ತಾರೆ. ಏಕೆಂದರೆ, ಇಂದು ಆರಾಧಿಸಲ್ಪಡುವ ವಸ್ತುಗಳು -ಕ್ಷೇತ್ರಗಳು ಎಲ್ಲೆಂದರಲ್ಲಿ ಕಾಣಸಿಗುತ್ತದೆ. ಬಹುದೇವಾರಾಧಕರು ನೂಹ್ (ಅ) ರವರ ಕಾಲದಿಂದಲೂ ಹಲವಾರ ಆರಾಧ್ಯರನ್ನು ಸ್ವಯಂ ಕಲ್ಪಿಸಿಕೊಂಡು ಪೂಜಿಸುತ್ತಾ ಬರುತ್ತಿದ್ದಾರೆ.

ವದ್ದ್, ಸುವಾಅ್, ಯಊಕು ಮತ್ತು ದರ್ಸ್ ಮುಂತಾದವು ನೂಹ್ (ಅ)ರವರ ಕಾಲದಲ್ಲಿ ಆರಾಧಿಸಲ್ಪಡುತ್ತಿದ್ದ ವಸ್ತುಗಳಾಗಿದ್ದವು.

ಅದೇ ಪ್ರಕಾರ ಅರಬಿಯರಲ್ಲೂ ಹಲವಾರು ಆರಾಧ್ಯರು ಇದ್ದರು. ಪರ್ಷಿಯನ್ನರಿಗೆ ಮತ್ತು ರೋಮನ್ನರಿಗೂ ಬೇರೆ ಬೇರೆ ಆರಾಧ್ಯರಿದ್ದರು. ಅವರೆಲ್ಲರೂ ಇತರ ಆರಾಧ್ಯರೊಂದಿಗೆ ಅಲ್ಲಾಹನನ್ನೂ ಆರಾಧಿಸುತ್ತಿದ್ದರು.

**ಅಲ್ಲಾಹನನ್ನು ನೈಜ ಆರಾಧ್ಯನೆಂದೂ ಅಲ್ಲಾಹೇತರ ಆರಾಧ್ಯ ವಸ್ತುಗಳೆಲ್ಲವೂ ಮಿಥ್ಯವೆಂದೂ ತಿಳಿದುಕೊಳ್ಳಬೇಕು.**

ಈಗ ಮೇಲಿನ ವಿವರಣೆಗಳಿಂದ (لا إله إلا الله) ದಲ್ಲಿ ಅಂತರ್ಗತವಾಗಿರುವ ವಿಷಯಗಳನ್ನೇ ಅಲ್ಲಾಹನ ಪ್ರವಾದಿಗಳೆಲ್ಲರೂ ಅವರ ಸಂದೇಶ ಪ್ರಚಾರದ ವಸ್ತುವಾಗಿ ಮಾಡಿಕೊಂಡಿದ್ದರು. ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನಿಗಾಗಿ ಮಾತ್ರ ಸಲ್ಲಿಸುವುದು. ಅಲ್ಲಾಹನಿಗೆ ಹೊರತಾದ ಯಾವುದೇ ವ್ಯಕ್ತಿ ಅಥವಾ ಶಕ್ತಿಗಳನ್ನು ಆರಾಧಿಸದಿರುವುದು ಈ ಸಂದೇಶದ ತಿರುಳಾಗಿತ್ತು. ಇದನ್ನು ಅಲ್ಲಾಹನು ಅವನ ಪವಿತ್ರ ಗ್ರಂಥದಲ್ಲಿ ಈ ರೀತಿ ಉಲ್ಲೇಖಿಸುತ್ತಾನೆ,

ذٰلِكَ بِأَنَّ اللّٰهَ هُوَ الْحَقُّ وَأَنَّ مَا يَدْعُونَ مِنْ دُونِهِ
هُوَ الْبَاطِلُ (سورة الحج الآية ٦٢)

**"ಅದೇಕೆಂದರೆ ಅಲ್ಲಾಹನೇ ಪರಮ ಸತ್ಯ. ಅಲ್ಲಾಹನನ್ನು ಬಿಟ್ಟು ಇವರು ಪ್ರಾರ್ಥಿಸುವಂತವುಗಳೆಲ್ಲವೂ ಮಿಥ್ಯ".** (22-62)

ಈ ವಚನವು ಇಬಾದತ್ ಅಥವಾ ಆರಾಧನಾ ಕರ್ಮಗಳೆಲ್ಲವೂ ಅಲ್ಲಾಹನಿಗೆ ಸಲ್ಲತಕ್ಕದ್ದೆಂದೂ ಅವನೋರ್ವನೇ ಆರಾಧನೆಗೆ ಅರ್ಹನಾದವನೆಂದೂ ಅವನ ಹೊರತಾದ ಎಲ್ಲಾ ಆರಾಧ್ಯರು "ಮಿಥ್ಯ"ವೆಂದೂ ಅರಿತುಕೊಳ್ಳಬೇಕೆಂದು ಉಪದೇಶಿಸುತ್ತದೆ.

ಈ ಕುರಿತಾದ ಅಲ್ಲಾಹನ ಇನ್ನೊಂದು ವಚನ ಹೀಗಿದೆ.

وَلَقَدْ بَعَثْنَا فِي كُلِّ أُمَّةٍ رَّسُولًا أَنِ اعْبُدُوا اللّٰهَ وَاجْتَنِبُوا الطَّاغُوتَ
(سورة النحل الآية ٣٦)

**"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕರನ್ನು ಕಳುಹಿಸಿದೆವು ಮತ್ತು ಅಲ್ಲಾಹನ ಆರಾಧನೆ ಮಾಡಿರಿ ಮತ್ತು "ತಾಗೂತ್"ನ ಆರಾಧನೆಯಿಂದ ದೂರವಿರಿ ಎಂದು ಅವರ ಮೂಲಕ ಎಚ್ಚರಿಕೆ ನೀಡಿದೆವು".** (ಅನ್ನಹ್ಲ್ - 36)

**ತಾಗೂತಿನ ನಿಜಾರ್ಥ**

**ತಾಗೂತ್ :** ಅಲ್ಲಾಹನ ಹೊರತಾಗಿ ಮನುಷ್ಯರು, ಜಿನ್ನ್‌ಗಳು, ದೇವಚರರು(ಮಲಕ್‌ಗಳು) ಅಥವಾ ಸೃಷ್ಠಿಗಳ ಪೈಕಿ ಯಾವುದನ್ನಾದರೂ ಆರಾಧ್ಯ ವಸ್ತುವಾಗಿ ಸ್ವೀಕರಿಸಿಕೊಂಡರೆ ಆ ವಸ್ತುವನ್ನು `ತಾಗೂತ್' ಎನ್ನಲಾಗುತ್ತದೆ. ಯಾವ ತನಕ ಅವರು ಅದನ್ನು ತೊರೆಯುವುದಿಲ್ಲವೊ, ಅದು ಲಾಭ-ನಷ್ಟಗಳನ್ನು ಉಂಟು ಮಾಡಲಾರವೆಂದು ಗ್ರಹಿಸುವುದಿಲ್ಲವೊ ಅಲ್ಲಿಯ ತನಕ.

ಆರಾಧಿಸಲ್ಪಡುವ ಜಡವಸ್ತುಗಳಿಗೆ ಹೊರತಾದ ಮಲಾಇಕ್‌ಗಳು ಪ್ರವಾದಿಗಳು ಮತ್ತು ಸಜ್ಜನರು ಯಾವತ್ತೂ ಅವರನ್ನು ಆರಾಧಿಸುವುದನ್ನು ತಾಗೂತ್‌ಗಳಾಗುವುದನ್ನು ಇಷ್ಟಪಡಲಾರರು ಎನ್ನುವುದನ್ನು ಮರೆಯಬಾರದು.

ವಾಸ್ತವದಲ್ಲಿ ತಾಗೂತ್ ಶೈತಾನನೇ ಆಗಿರುತ್ತಾನೆ. ಅವನೇ ಜನರನ್ನು ಈ ವಸ್ತುಗಳ ಆರಾಧನೆಯ ಕಡೆಗೆ ಆಮಂತ್ರಿಸುತ್ತಾನೆ ಮತ್ತು ಅದರಿಂದ ಜನರಿಗೆ ಆಹ್ಲಾದಕರವೂ-ತೃಪ್ತಿಯೂ ದೊರಕುವಂತೆ ಮಾಡುತ್ತಾನೆ. ಆದರೆ, ಪ್ರವಾದಿ(ಸ)ರವರಾಗಲಿ, ಇತರ ಅಂಬಿಯಾ ಮುರ್‌ಸಲೀನ್‌ಗಳಾಗಲಿ, ದೇವಚರರು ಅಥವಾ ಸಜ್ಜನರಾಗಲಿ ಅಲ್ಲಾಹನ ಹೊರತು ಸೃಷ್ಠಿಗಳನ್ನು ಆರಾಧ್ಯ ವಸ್ತುವಾಗಿ ಅಂಗೀಕರಿಸುವುದನ್ನು ಇಷ್ಟಪಡಲಾರರು. ಅವರು ಇದನ್ನು ವಿರೋಧಿಸುವುದು ಮಾತ್ರವಲ್ಲದೆ ಈ ಒಂದು ಘೋರ ಪಾಪದ ವಿರುದ್ಧ ಸಮರ ಹೂಡಿದವರಾಗಿದ್ದಾರೆ. ಆದ್ದರಿಂದ ಅವರು ತಾಗೂತ್ ಎಂದೆಣಿಸಲಾರರು.

ಅಲ್ಲಾಹನ ಹೊರತು ಆರಾಧಿಸಲ್ಪಡುವ ಸರ್ವ ವಸ್ತು ಮತ್ತು ಶಕ್ತಿಗಳೂ ತಗೂತ್ ಆಗಿದೆ. ಜನರು ತಮ್ಮನ್ನು ಆರಾಧಿಸುವುದನ್ನು ಅವರು ಇಷ್ಟಪಡುತ್ತಾರೆ. ಉದಾಹರಣೆಗೆ ಇಬ್ಲೀಸ್, ಫಿರ್‌ಔನ್ ಮತ್ತು ತಮ್ಮನ್ನು ತಾವು ದೇವ ಮಾನವರೆಂದೂ, ದೇವಿಗಳೆಂದೊ, ದೇವಾಂಶ ಸಂಭೂತರೆಂದೊ ಪ್ರಚರಿಸಿಕೊಂಡು ಅದರಿಂದ ಜನರ ವಿಶ್ವಾಸವನ್ನು ಶೋಷಣೆ ಮಾಡಿ ಸ್ವಾರ್ಥ ಸಾಧಿಸುವ ಸರ್ವ ಜನರೂ, ಜಡವಸ್ತುಗಳು, ಕಲ್ಲು, ಮರ, ಮೂರ್ತಿಗಳೆಲ್ಲವೂ ತಾಗೂತ್‌ಗಳಾಗಿವೆ. ಏಕೆಂದರೆ ಅಲ್ಲಾಹನಿಗೆ ಹೊರತಾಗಿ ಇವುಗಳು ಆರಾಧಿಸಲ್ಪಡುತ್ತದೆ.

ಈ ಪದರ ವಿವರಣೆಯನ್ನು ಅಲ್ಲಾಹನು ಪವಿತ್ರ ಕುರ್‌ಆನಿನ ಈ ವಚನದಲ್ಲಿ ನೀಡಿರುತ್ತಾನೆ.

وَمَا اَرْسَلْنَا مِنْ قَبْلِكَ مِنْ رَسُوْلٍ اِلَّا نُوْحِىْٓ اِلَيْهِ اَنَّهٗ لَآ اِلٰهَ اِلَّآ
اَنَا فَاعْبُدُوْنِ (سورة الانبياء،الآية ٢٥)

**“ನಾವು ನಿಮಗಿಂತ ಮುಂಚೆ ಕಳುಹಿಸಿದ ಪ್ರತಿ ಪ್ರವಾದಿಗಳಿಗೂ ‘ನನ್ನ ಹೊರತು ಅನ್ಯ ಆರಾಧ್ಯರಿಲ್ಲ. ಆದ್ದರಿಂದ ನೀವು ನನ್ನ ಆರಾಧನೆಯನ್ನೇ ಮಾಡಿರಿ’’ ಎಂದು ದಿವ್ಯವಾಣಿ ಮಾಡಿದ್ದೆವು’’**(21-25)

ಈ ವಚನದಲ್ಲಿ ಅಲ್ಲಾಹನು ಸರ್ವ ಪ್ರವಾದಿಗಳೂ ‘ತೌಹೀದ್’ (ಏಕದೇವಾರಾಧನೆ)ನ

ಸಂದೇಶವನ್ನೇ ಪ್ರಚರಿಸಿದ್ದರೆನ್ನುವುದನ್ನು ಸ್ಪಷ್ಟಪಡಿಸುತ್ತಾನೆ. ಅಂದರೆ ಅಲ್ಲಾಹೇತರರ ಆರಾಧನೆ ವ್ಯರ್ಥ ಮತ್ತು ಅಕ್ರಮವಾಗಿದೆ ಎಂದರ್ಥ.

## ಮುಶ್ರಿಕರು (ಲಾಇಲಾಹ) ಇಲ್ಲಲ್ಲಾಹ್ لا إله إلا الله ದ ಅರ್ಥವನ್ನು ಗ್ರಹಿಸಿದ್ದರು.

'ಲಾ ಇಲಾಹ ಇಲ್ಲಲ್ಲಾಹ್' ಎನ್ನುವುದನ್ನು ಕೇವಲ ಒಂದು ಮಂತ್ರವಾಗಿ ಪಠಿಸಿಕೊಂಡು ಅಲ್ಲಾಹನೊಂದಿಗೆ ಇತರರನ್ನೂ ಅವಲಂಬಿಸಿ ಪ್ರಾರ್ಥಿಸಿಕೊಂಡು ಜೀವಿಸುವುದಕ್ಕೆ ಅವಕಾಶವಿದೆ ಎಂದಾಗಿದ್ದರೆ ಯಾರೂ ಈ ಸಂದೇಶವನ್ನು ಸ್ವೀಕರಿಸಲು ಹಿಂಜರಿಯುತ್ತಿರಲಿಲ್ಲ. ಮುಶ್ರಿಕರಿಗೆ ಲಾಇಲಾಹ ಇಲ್ಲಲ್ಲಾಹ್ ಎಂಬ ವಚನವನ್ನು ಉಚ್ಚರಿಸುವುದೆಂದರೆ ಅವರು ಆರಾಧಿಸುತ್ತಿದ್ದ ಅಲ್ಲಾಹೇತರ ಆರಾಧ್ಯರೆಲ್ಲರನ್ನೂ ನಿರಾಕರಿಸುವುದು ಎಂಬ ಅರಿವು ಸ್ಪಷ್ಟವಾಗಿತ್ತು. ಈ ವಚನವನ್ನು ಅಂಗೀಕರಿಸಿದಾಗ ಅವರು ತಲ ತಲಾಂತರದಿಂದ ಸಾಂಪ್ರದಾಯಿಕವಾಗಿ ಆರಾಧಿಸಿಕೊಂಡು ಬಂದ ಅಲ್ಲಾಹೇತರ ಆರಾಧ್ಯ ವಸ್ತುಗಳೆಲ್ಲವೂ ನಿರರ್ಥಕವಾಗಿ ಹೋಗುವುದೆಂದೂ ಮತ್ತೆ ಅವುಗಳಿಗೆ ಯಾವುದೇ ಮಹತ್ವವಿರುವುದಿಲ್ಲವೆಂದು ಅರಿತುಕೊಂಡೇ ಅವರು ಆ ವಚನವನ್ನು ನಿರಾಕರಿಸಿದರು. ಅದನ್ನು ವಿರೋಧಿಸತೊಡಗಿದರು ಮತ್ತು ಅದನ್ನು ನಿರ್ನಾಮ ಮಾಡಲು ಪಣತೊಟ್ಟರು.

ಇದರಿಂದ ವ್ಯಕ್ತವಾಗುವುದೇನೆಂದರೆ ಈ ವಚನದ ತಾತ್ಪರ್ಯ ಮತ್ತು ಆಶಯವು ಆರಾಧನೆಗಳೆಲ್ಲವನ್ನೂ ಅಲ್ಲಾಹನಿಗೆ ಮೀಸಲಾಗಿರಿಸುವುದು ಮತ್ತು ಅಲ್ಲಾಹನಿಗೆ ಹೊರತಾಗಿ ಆರಾಧಿಸಲ್ಪಡುವ ಸರ್ವ ವಸ್ತುಗಳನ್ನೂ ತೊರೆಯುವುದಾಗಿದೆ. ಅದು ಪ್ರವಾದಿಗಳಾಗಿದ್ದರೂ, ಮಲಾಇಕ್‌ಗಳಾಗಿದ್ದರೂ, ಸಜ್ಜನರಾಗಿದ್ದರೂ ಸರಿಯೇ. ಅವುಗಳನ್ನೆಲ್ಲಾ ತೊರೆದು ಕೇವಲ ಏಕೈಕನಾದ ಅಲ್ಲಾಹನ ಆರಾಧನೆ ಮಾಡಬೇಕೆನ್ನುವುದೇ ಈ ಸಾಕ್ಷ್ಯ ವಚನದಲ್ಲಿ ಅಂತರ್ಗತ ಆಶಯವಾಗಿದೆ. ಏಕೆಂದರೆ ಸರ್ವ ಚರಾಚರಗಳನ್ನು ಸೃಷ್ಟಿಸಿದವನೂ, ಪರಿಪಾಲಿಸುತ್ತಿರುವವನೂ, ಆಹಾರ-ನೀರು ಒದಗಿಸುವವನೂ ಅವನೇ ಆಗಿದ್ದಾನೆ. ಅವನು ಸರ್ವ ವಸ್ತುಗಳ ಮೇಲೆ ನಿಯಂತ್ರಣ ಹೊಂದಿರುತ್ತಾನೆ. ಅವನು ಜೀವನವನ್ನೂ-ಮರಣವನ್ನೂ ನೀಡುವವನೂ, ಸೃಷ್ಟಿಗಳ ಸರ್ವ ಅಪೇಕ್ಷೆಗಳನ್ನು ಪೂರ್ತೀಕರಿಸುವವನೂ ಆಗಿದ್ದಾನೆ. ಆದ್ದರಿಂದ ಆರಾಧಿಸಲ್ಪಡುವ ಹಕ್ಕಿರುವವನು ಅವನೋರ್ವನೇ ಆಗಿದ್ದು ಅವನ ಸೃಷ್ಟಿಗಳ ಹೃದಯ ಸ್ಪಂಧನವನ್ನು ಅವನು ಅರಿತಿರುತ್ತಾನೆ.

### ಜಗತ್ತಿಗೆ ಪ್ರವಾದಿಗಳನ್ನು ಕಳುಹಿಸಲಾದ ಉದ್ದೇಶ :

ಅವನೋರ್ವನನ್ನೇ ಆರಾಧಿಸಬೇಕೆಂದು ತಿಳಿಸಿಕೊಡಲು ಅಲ್ಲಾಹನು ಜಗತ್ತಿಗೆ ಪ್ರವಾದಿಗಳನ್ನು ರವಾನಿಸಿದನು. ಅವನ ಅರಿವು-ಅವನ ಶಕ್ತಿ-ಸಾಮರ್ಥ್ಯ ಅವನ ಪರಿಪೂರ್ಣ ಗುಣ ನಾಮಗಳನ್ನು ಪರಿಚಯಿಸಿಕೊಟ್ಟು. ಅವುಗಳ ಬುನಾದಿಯಲ್ಲಿ ಸರ್ವ ರೀತಿಯ ಆರಾಧನೆಗಳನ್ನು ಅವನಿಗೆ ಮೀಸಲಾಗಿರಿಸಬೇಕೆಂದು ಸಾರುವುದೇ ಪ್ರವಾದಿಗಳ ಹೊಣೆಗಾರಿಕೆಯಾಗಿತ್ತು.

ಪರಿಶುದ್ಧನಾದ ಅಲ್ಲಾಹನಷ್ಟೆ ಲಾಭ-ನಷ್ಟಗಳನ್ನುಂಟು ಮಾಡಬಲ್ಲವನಾಗಿದ್ದಾನೆ. ತನ್ನ ದಾಸರ ಸ್ಥಿತಿ-ಗತಿಗಳನ್ನು ಅರಿಯುವವನೂ, ಅವರ ಅಹವಾಲುಗಳನ್ನು(ಪ್ರಾರ್ಥನೆ) ಆಲಿಸುವವನೂ ಮತ್ತು ಅವರ ಸರ್ವ ಅವಶ್ಯಕತೆಗಳನ್ನು ಪೂರೈಸಿಕೊಟ್ಟು ಅವರನ್ನು ಉನ್ನತಿಯೆಡೆಗೆ ಸಾಗಿಸಬಲ್ಲವನಾಗಿದ್ದಾನೆ. ಆದ್ದರಿಂದ ಅವನೇ ಆರಾಧನೆಗೆ ಅರ್ಹನಾಗುತ್ತಾನೆ. ಇತರರನ್ನೆಲ್ಲಾ

ತೊರೆದು ಕೇವಲ ಅಲ್ಲಾಹನೋರ್ವನನ್ನೇ ಆರಾಧಿಸಬೇಕೆನ್ನುವುದು ಅವಶ್ಯಕವೂ ಅನಿವಾರ್ಯವೂ ಆದ ಸಂಗತಿಯಾಗಿದೆ.

**ಪ್ರವಾದಿಗಳ ಸಂದೇಶ**

ಅಲ್ಲಾಹನು ತನ್ನ ಸಂದೇಶವಾಹಕರಾದ ನೂಹ್(ಅ), ಹೂದ್(ಅ), ಸ್ವಾಲಿಹ್(ಅ), ಸುಅಬ್(ಅ)ರವರು ಅವರ ಸಮುದಾಯಕ್ಕೆ ನೀಡಿದ ಸಂದೇಶವನ್ನು ಈರೀತಿ ಉಲ್ಲೇಖಿಸುತ್ತಾನೆ,

اُعْبُدُوا اللّٰهَ مَالَكُمْ مِنْ اِلٰهٍ غَيْرُهٗ" (سورة هود الآية ٥٠)

**"ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ಆರಾಧನೆ ಮಾಡಿರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯರಲ್ಲ"**(11-50)

ಈ ಸಂದೇಶವು ಅಲ್ಲಾಹನ ಈ ಆದೇಶಕ್ಕೆ ಅನುಗುಣವಾಗಿಯೇ ಇತ್ತು.

وَلَقَدْ بَعَثْنَا فِيْ كُلِّ اُمَّةٍ رَّسُوْلاً اَنِ اعْبُدُوااللّٰهَوَاجْتَنِبُوا الطَّاغُوْتَ

(سورة النحل الآية ٣٦)

**"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕರನ್ನು ಕಳುಹಿಸಿದೆವು ಮತ್ತು "ಅಲ್ಲಾಹನ ಆರಾಧನೆ ಮಾಡಿರಿ ಮತ್ತು ತಾಗೂತ್‌ನ ಆರಾಧನೆಯಿಂದ ದೂರವಿರಿ" ಎಂದು ಅವರ ಮುಖಾಂತರ ಎಚ್ಚರಿಕೆ ನೀಡಿದೆವು"**(16-36)

**ಹೂದ್ ಜನಾಂಗದವರ ಉತ್ತರ**

ಹೂದ್(ಅ)ರವರು ಮೇಲಿನ ವಚನಗಳೊಂದಿಗೆ ಅವರ ಸಮುದಾಯವನ್ನು ಅಲ್ಲಾಹನೆಡೆಗೆ ಆಮಂತ್ರಿಸಿದಾಗ ಅವರು ಉತ್ತರಿಸಿದ್ದು ಹೀಗೆ,

اَجِئْتَنَا لِنَعْبُدَاللّٰهَ وَحْدَهٗ وَنَذَرَمَا كَانَ يَعْبُدُ آبَاءُ نَا فَاْتِنَا بِمَاتَعِدُنَا

اِنْ كُنْتَ مِنَ الصَّادِقِيْنَ (سورة الاعراف، الآية ٧٠)

**"ನಾವು ಏಕ ಮಾತ್ರ ಅಲ್ಲಾಹನನ್ನು ಆರಾಧಿಸಬೇಕು ಮತ್ತು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದವರನ್ನು ಬಿಟ್ಟು ಬಿಡಬೇಕೆಂದು ನೀನು ನಮ್ಮ ಬಳಿಗೆ ಬಂದಿರುವೆಯಾ? ನೀನು ಸತ್ಯವಾದಿಯಾಗಿದ್ದರೆ ನೀನು ನಮಗೆ ಬೆದರಿಕೆ ಹಾಕುತ್ತಿರುವ ಆ ಯಾತನೆಯನ್ನು ತಂದು ಬಿಡು"**
(7-70)

**ಹೂದ್ ಜನಾಂಗವು ಆರಾಧನೆಯ ಅರ್ಥವನ್ನು ಗ್ರಹಿಸಿಕೊಂಡಿದ್ದರು:**

ಹೂದ್ ಸಮುದಾಯವು ಇಬಾದತ್‌ನ ಅರ್ಥವನ್ನು ಗ್ರಹಿಸಿಕೊಂಡಿದ್ದರೆನ್ನುವುದರಲ್ಲಿ ಸಂಶಯವಿಲ್ಲ. ಸರ್ವ ಆರಾಧನಾ ಕರ್ಮಗಳನ್ನು ಏಕೈಕನಾದ ಅಲ್ಲಾಹನಿಗೆ ಮುಡಿಪಾಗಿಡಬೇಕು. ಅಲ್ಲಾಹೇತರ ಸರ್ವ ಆರಾಧ್ಯರಿಂದಲೂ ದೂರವಿರಬೇಕು ಎನ್ನುವುದನ್ನು ಗ್ರಹಿಸಿಕೊಂಡೇ ಅವರು

ಈ ರೀತಿ ಉತ್ತರಿಸಿದ್ದರು.

**اَجِئْتَنَا لِنَعْبُدَاللّٰهَ وَحْدَهُ وَنَذَرَمَا كَانَ يَعْبُدُ آبَاءُ نَا فَأْتِنَا بِمَاتَعِدُنَا اِنْ كُنْتَ مِنَ الصَّادِقِيْنَ** (سورة الاعراف، الآية ٧٠)

**"ನಾವು ಏಕಮಾತ್ರ ಅಲ್ಲಾಹನನ್ನು ಆರಾಧಿಸಬೇಕು ಮತ್ತು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದವರನ್ನು ಬಿಟ್ಟು ಬಿಡಬೇಕೆಂದು ನೀನು ನಮ್ಮ ಬಳಿಗೆ ಬಂದಿರುವೆಯಾ? ನೀನು ಸತ್ಯವಾದಿಯಾಗಿದ್ದರೆ ನೀನು ನಮಗೆ ಬೆದರಿಕೆ ಹಾಕುತ್ತಿರುವ ಆ ಯಾತನೆಯನ್ನು ತಂದು ಬಿಡು"** (7-70)

ಇಂತಹಾ ಧಿಕ್ಕಾರದ ಮಾತುಗಳಿಂದ ಅವರು ಪ್ರವಾದಿಗಳ ಮುಂದೆ ಸವಾಲುಗಳನ್ನೊಡ್ಡ ತೊಡಗಿದಾಗ ಅಲ್ಲಾಹನು ಅವರ ಮೇಲೆ ಯಾತನೆಯನ್ನು ಎರಗಿಸಿ ಅವರನ್ನು ಸರ್ವನಾಶ ಮಾಡಿದರು.

## ಪ್ರವಾದಿಗಳು ಜನರನ್ನು ಧರ್ಮದ ಕಡೆಗೆ ಕರೆದ ರೀತಿ

ಪ್ರವಾದಿಗಳು ತಮ್ಮ ತಮ್ಮ ಸಮುದಾಯಗಳ ಮುಂದೆ ಅಲ್ಲಾಹನ ನಾಮಗಳನ್ನು, ಗುಣ-ವಿಶೇಷಣಗಳನ್ನು, ಅವನ ಔದಾರ್ಯಗಳನ್ನೂ ವಿವರಿಸಿ ಹೇಳುತ್ತಾ ಅಲ್ಲಾಹನ ಆರಾಧನೆಯ ಕಡೆಗೆ ಜನರನ್ನು ಆಮಂತ್ರಿಸುತ್ತಿದ್ದರು.

ಪರಿಶುದ್ಧನಾದ ಅಲ್ಲಾಹನು ಗ್ರಂಥಗಳನ್ನು ಅವತೀರ್ಣಗೊಳಿಸಿದ ಮತ್ತು ಪ್ರವಾದಿಗಳನ್ನು ನಿಯುಕ್ತಿಗೊಳಿಸಿದ ಹಿಂದಿನ ಏಕಮಾತ್ರ ಉದ್ದೇಶ ಜನರು ಅವನನ್ನು ಮಾತ್ರ ಆರಾಧಿಸಬೇಕು ಎನ್ನುವುದಾಗಿದೆ ಮತ್ತು ಅವನಿಗೆ ಯಾರೂ ಸಹಾಯಕರೊ-ಸಹಬಾಗಿಗಳೊ ಇಲ್ಲ ಎನ್ನುವುದನ್ನು ಜನರು ಅರಿಯಬೇಕೆಂದಾಗಿದೆ. ಅವನು ತನ್ನ ಸೃಷ್ಟಿಗಳ ಮುಂದೆ ತನ್ನ ಹಕ್ಕು ಮತ್ತು ಅಧಿಕಾರವನ್ನು ಪ್ರಕಟಪಡಿಸಲು, ತನ್ನ ನಾಮ-ವಿಶೇಷಣಗಳನ್ನು ಜನರಿಗೆ ನೆನಪಿಸಲು, ಅವನ ಮಹಾನತೆ, ಔದಾರ್ಯ, ಪರಿಪೂರ್ಣ ಶಕ್ತಿ ಮತ್ತು ಜ್ಞಾನ, ಸರ್ವ ವಸ್ತುವಿನ ಮೇಲೂ ಅವನಿಗಿರುವ ಹಿಡಿತ ಮತ್ತು ಸಾಮರ್ಥ್ಯವನ್ನು ಜನರಿಗೆ ಸರಿಯಾದ ರೀತಿಯಲ್ಲಿ ತಿಳಿಸಿಕೊಡಲಿಕ್ಕಾಗಿದೆ. ಇದೆಲ್ಲವೂ ಅವನ ಏಕತ್ವವನ್ನೂ-ಏಕಸ್ವಾಮ್ಯವನ್ನೂ ಜನರು ಅರ್ಥೈಸಿಕೊಳ್ಳಬೇಕೆಂಬ ನಿಟ್ಟಿನಲ್ಲಾಗಿದೆ ಮತ್ತು ಆರಾಧನೆಗಳೆಲ್ಲವನ್ನೂ ಅವನಿಗೆ ಮೀಸಲಾಗಿರಿಸಬೇಕೆಂದಾಗಿದೆ.

ಪ್ರವಾದಿಗಳ ನಿಯುಕ್ತಿ, ಗ್ರಂಥಗಳ ಅವತರಣದ ಉದ್ದೇಶ ಅವನ ನಾಮ-ವಿಶೇಷಣಗಳನ್ನು ಬಹಿರಂಗ ಪಡಿಸುವುದಾಗಿದೆ. ಅವನ ಔದಾರ್ಯಗಳನ್ನು ತಿಳಿಸಿಕೊಡುವುದು ಮತ್ತು ಅವಲಂಬನೆ, ನಿರೀಕ್ಷೆ, ಯಾಚನೆ ಮತ್ತು ಪ್ರಾರ್ಥನೆಗೆ ಅವನಷ್ಟೇ ಹಕ್ಕುದಾರನು ಆದ್ದರಿಂದ ಎಲ್ಲಾ ಸಮುದಾಯ ಮತ್ತು ಜನಾಂಗಗಳೂ ಅವನನ್ನೇ ಆರಾಧಿಸಬೇಕು ಅವನ ನಿಯಮ ನಿರ್ದೇಶನಗಳನ್ನು ಅರಿತು ಅಳವಡಿಸಿಕೊಂಡು ಜೀವಿಸಬೇಕು ಮತ್ತು ಅವನ ಔದಾರ್ಯವನ್ನೇ ನೆಚ್ಚಿಕೊಂಡು ಅವನ

ಸಂತೃಪ್ತಿಯನ್ನು ಆಗ್ರಹಿಸಿಕೊಂಡು ಪ್ರವರ್ತಿಸಬೇಕು ಎನ್ನುವುದನ್ನು ಮನವರಿಕೆ ಮಾಡಿ ಕೊಡುವುದಾಗಿದೆ. ಪವಿತ್ರ ಕುರ್‌ಆನಿನಲ್ಲಿ ಹಲವಾರು ಕಡೆ ಈ ವಿಷಯವು ಪ್ರಸ್ತಾಪಗೊಂಡಿರುವುದನ್ನು ಕಾಣಬಹುದಾಗಿದೆ. ಮಾತ್ರವಲ್ಲದೆ, ಎಲ್ಲಾ ಪ್ರವಾದಿಗಳೂ ಈ ವಿಷಯವನ್ನೇ ತಮ್ಮ ಪ್ರಬೋಧನೆಯ ಮುಖ್ಯ ವಿಷಯವಾಗಿ ಮಾಡಿಕೊಂಡಿದ್ದರು. ಅಲ್ಲಾಹನೇ ಹೇಳುತ್ತಾನೆ.

قَالَتْ رُسُلُهُمْ اَفِى اللّٰهِ شَكٌّ فَاطِرِالسَّمٰوٰتِ وَالْاَرْضِ (سورة ابراهيم،الآية ١٠)

"ಅವರ ರಸೂಲರು ಹೇಳಿದರು, ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನಾದ ಅಲ್ಲಾಹನ ಬಗ್ಗೆ ನಿಮಗೆ ಸಂಶಯವಿದೆಯೇ?"

**ನೂಹ್(ಅ)ರ ದೇವನಿಷ್ಠೆ, ಜನಾಂಗವನ್ನು ಏಕದೇವಾರಾಧನೆಗೆ ಕರೆದ ವೈಖರಿ**

ಅಲ್ಲಾಹು ಹೇಳುತ್ತಾನೆ,

"وَاتْلُ عَلَيْهِمْ نَبَاَ نُوْحٍ، اِذْقَالَ لِقَوْمِهٖ يٰقَوْمِ اِنْ كَانَ كَبُرَ عَلَيْكُمْ مَقَامِىْ وَتَذْكِيْرِىْ بِاٰيٰتِ اللّٰهِ فَعَلَى اللّٰهِ تَوَكَّلْتُ فَاَجْمِعُوْا اَمْرَكُمْ وَشُرَكَائَكُمْ ثُمَّ لَايَكُنْ اَمْرُكُمْ عَلَيْكُمْ غُمَّةً ثُمَّ اقْضُوْااِلَىَّ وَلَاتُنْظِرُوْنِ • فَاِنْ تَوَلَّيْتُمْ فَمَاسَاَ لْتُكُمْ مِنْ اَجْرٍ اِنْ اَجْرِىَ اِلَّاعَلَى اللّٰهِ وَاُمِرْتُ اَنْ اَكُوْنَ مِنَ الْمُسْلِمِيْنَ • (سورة يونس الآيتان، ٧١،٧٢)

"ಇವರಿಗೆ ನೂಹರ ಸಮಾಚಾರ ತಿಳಿಸಿರಿ. ಅವರು ತಮ್ಮ ಜನಾಂಗಕ್ಕೆ ಹೇಳಿದಾಗಿನ ವೃತ್ತಾಂತ " ಓ ನನ್ನ ಜನಾಂಗ ಬಾಂಧವರೇ, ನಿಮ್ಮ ನಡುವೆ ನನ್ನ ಇರುವಿಕೆಯು ಅಲ್ಲಾಹನ ವಚನಗಳನ್ನು ಹೇಳಿ ಹೇಳಿ ನಿಮ್ಮನ್ನು ಅಲಕ್ಷ ಭಾವದಿಂದ ಎಚ್ಚರಗೊಳಿಸುವುದೂ ನಿಮಗೆ ಅಸಹನೀಯವಾಗಿರುವುದಾದರೆ ನನ್ನ ಭರವಸೆ ಅಲ್ಲಾಹನ ಮೇಲಿದೆ. ನೀವು ಸ್ವಯಂ ನಿಶ್ಚಯಿಸಿಕೊಂಡಿರುವ ಸಹಭಾಗಿಗಳನ್ನು ಜತೆಗೂಡಿಸಿಕೊಂಡು ಒಂದು ಒಮ್ಮತದ ನಿರ್ಧಾರವನ್ನು ಮಾಡಿಕೊಳ್ಳಿರಿ. ನಿಮ್ಮ ಮುಂದಿರುವ ಯೋಜನೆಯ ಯಾವ ಅಂಶವೂ ನಿಮ್ಮ ದೃಷ್ಟಿಯಿಂದ ಮರೆಯಾಗಿ ಹೋಗದಂತೆ ಅದರ ಬಗ್ಗೆ ಚೆನ್ನಾಗಿ ವಿವೇಚಿಸಿಕೊಳ್ಳಿರಿ. ಅನಂತರ ಅದನ್ನು ನನ್ನ ವಿರುದ್ಧ ಕಾರ್ಯಾಚರಣೆಗೆ ತನ್ನಿರಿ ಮತ್ತು ನನಗೆ ಸಮಯಾವಕಾಶ ಕೊಡಲೇ ಬೇಡಿರಿ. ನೀವು ನನ್ನ

**ಉಪದೇಶವನ್ನು ತಿರಸ್ಕರಿಸಿದರೆ, (ನನಗೆ ನಷ್ಟವೇನು?) ನಾನಂತೂ ನಿಮ್ಮಿಂದ ಯಾವತ್ತೂ ಪ್ರತಿಫಲಾಪೇಕ್ಷಕನಾಗಿರಲಿಲ್ಲ. ನನ್ನ ಪ್ರತಿಫಲವು ಅಲ್ಲಾಹನಲ್ಲಿದೆ. (ಯಾರಾದರೂ ಮಾನ್ಯ ಮಾಡಲಿ ಅಥವಾ ಮಾಡದಿರಲಿ) ನಾನು ಸ್ವಯಂ ಮುಸ್ಲಿಮನಾಗಿರಬೇಕೆಂದು ನನಗೆ ಆಜ್ಞಾಪಿಸಲಾಗಿರುತ್ತದೆ''**(10/71, 72)

ನೂಹ್ (ಅ) ತಾನು ಸಂಪೂರ್ಣವಾಗಿ ಅಲ್ಲಾಹನನ್ನು ಅವಲಂಬಿಸಿಕೊಂಡಿರುವುದನ್ನೂ ಅವನನ್ನೇ ನಂಬಿಕೊಂಡು ಅವನ ಸಹಾಯವನ್ನೇ ನಿರೀಕ್ಷಿಸಿಕೊಂಡು ಜೀವಿಸುತ್ತಿರುವುದನ್ನು ಘೋಷಿಸಿದರು. ಶತ್ರುಗಳ ಬೆದರಿಕೆ ಮತ್ತು ಭಯವನ್ನು ಲೆಕ್ಕಿಸದೆ ಅಲ್ಲಾಹನ ಸತ್ಯಸಂದೇಶಗಳನ್ನು ಸಾರಿ ಹೇಳುವುದು ತನ್ನ ಕರ್ತವ್ಯವೆಂದು ತಿಳಿದರು. ಅದೇ ಪ್ರಕಾರ ಅವರು ಪ್ರವರ್ತಿಸಿದರು. ಸೃಷ್ಟಿಕರ್ತನ ಶಕ್ತಿ-ಸಾಮರ್ಥ್ಯಗಳ ಕುರಿತು ವಿವರಿಸಿದರು. ಸರ್ವವಸ್ತುಗಳ ಹಿಡಿತವು ಅಲ್ಲಾಹನಲ್ಲೇ ಇರುವುದೆಂದೂ ನಾಶ ಮತ್ತು ರಕ್ಷೆ ಅವನ ಕೈಯಲ್ಲಿರುವುದೆಂದೂ ಅವನು (ನೂಹ್) ಅವರನ್ನು ರಕ್ಷಿಸಲೂ ಅವರ ಶತ್ರುಗಳನ್ನು ನಾಶಪಡಿಸಲೂ ಅವನು(ಅಲ್ಲಾಹನು) ಶಕ್ತನಿದ್ದಾನೆನ್ನುವುದನ್ನು ಅವರು ಘಂಟಾಘೋಷವಾಗಿ ಸಾರಿದರು. ಅದೇ ಪ್ರಕಾರ ಅಲ್ಲಾಹನು ತನ್ನ ಸಂದೇಶ ವಾಹಕರನ್ನು ಸಂರಕ್ಷಿಸುತ್ತಾನೆ. ಅವರಿಗೆ ಸಂದೇಶ ಪ್ರಚಾರದ ಹೊಣೆ ವಹಿಸಿದವನು ಅವನೇ ಅವನೇ ಅವರ ಸಂರಕ್ಷಣೆಗೆ ಪರ್ಯಾಪ್ತನಿದ್ದಾನೆ.

**ನೂಹ್(ಅ)ರವರ ಕುರಿತಾದ ಅಧ್ಯಾಯ :**

ಅಲ್ಲಾಹು ಹೇಳುತ್ತಾನೆ.

بسم الله الرحمن الرحيم

اِنَّا اَرْسَلْنَا نُوحًا اِلٰى قَوْمِهٖ اَنْ اَنْذِرْ قَوْمَكَ مِنْ قَبْلِ اَنْ يَّاْتِيَهُمْ عَذَابٌ اَلِيْمٌ • قَالَ يٰقَوْمِ اِنِّى لَكُمْ نَذِيْرٌ مُّبِيْنٌ • اَنِ اعْبُدُوا اللّٰهَ وَاتَّقُوْهُ وَاَطِيْعُوْنِ • يَغْفِرْ لَكُمْ مِنْ ذُنُوْبِكُمْ وَيُؤَخِّرْكُمْ اِلٰى اَجَلٍ مُّسَمًّى اِنَّ اَجَلَ اللّٰهِ اِذَا جَآءَ لَا يُؤَخَّرُ لَوْ كُنْتُمْ تَعْلَمُوْنَ • قَالَ رَبِّ اِنِّى دَعَوْتُ قَوْمِىْ لَيْلًا وَّنَهَارًا فَلَمْ يَزِدْهُمْ دُعَائِىْ اِلَّا فِرَارًا • وَاِنِّى كُلَّمَا دَعَوْتُهُمْ لِتَغْفِرَ لَهُمْ جَعَلُوْا اَصَابِعَهُمْ فِىْ آذَانِهِمْ وَاسْتَغْشَوْا ثِيَابَهُمْ وَاَصَرُّوْا وَاسْتَكْبَرُوا اسْتِكْبَارًا • ثُمَّ اِنِّى دَعَوْتُهُمْ جِهَارًا • ثُمَّ اِنِّى اَعْلَنْتُ لَهُمْ وَاَسْرَرْتُ لَهُمْ اِسْرَارًا • فَقُلْتُ اسْتَغْفِرُوْا رَبَّكُمْ اِنَّهٗ

كَـانَ غَفَّارًا• يُـرْسِـلِ السَّمَآءَ عَلَيْكُمْ مِدْرَارًا• وَيُـمْدِدْ كُمْ بِاَمْوَالٍ وَّبَـنِيْـنَ وَيَجْعَلْ لَّكُمْ جَنّٰتٍ وَّيَجْعَلْ لَّكُمْ اَنْهَارًا • مَالَكُمْ لَا تَرْجُوْنَ لِلّٰهِ وَقَارًا• وَقَدْخَلَقَكُمْ اَطْوَارًا• (سورة نوح،الآيات ١ـ ١٤)

ನಾವು ನೂಹರನ್ನು ಅವರ ಜನಾಂಗದ ಕಡೆಗೆ ರವಾನಿಸದೆವು. ಅವರು ತಮ್ಮ ಜನಾಂಗದವರಿಗೆ ಅವರ ಮೇಲೆ ಒಂದು ವೇದನಾಯುಕ್ತ ಯಾತನೆ ಬಂದೆರಗುವುದಕ್ಕೆ ಮುಂಚೆಯೇ ಎಚ್ಚರಿಕೆ ನೀಡಲೆಂದು

ಅವರು ಹೇಳಿದರು : "ನನ್ನ ಜನಾಂಗದವರೇ, ನಾನು ನಿಮಗಾಗಿ ಓರ್ವ ಸುಸ್ಪಷ್ಟ ಎಚ್ಚರಿಕೆ ಕೊಡುವವ (ಸಂದೇಶವಾಹಕ)ನಾಗಿದ್ದೇನೆ.

ಅಲ್ಲಾಹನ ಆರಾಧನೆ ಮಾಡಿರಿ, ಅವನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ

ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ನಿಮ್ಮನ್ನು ಒಂದು ನಿಶ್ಚಿತ ಕಾಲದವರೆಗೆ ಉಳಿಸುವನು. ವಾಸ್ತವದಲ್ಲಿ ಅಲ್ಲಾಹನು ನಿಶ್ಚಯಿಸಿರುವ ಕಾಲವು ಬಂದು ಬಿಟ್ಟರೆ ಮತ್ತು ಅದನ್ನು ಮುಂದೂಡಲಾಗುವುದಿಲ್ಲ? ಅಯ್ಯೋ ನಿಮಗಿದು ತಿಳಿದಿರುತ್ತಿದ್ದರೆ"

"ಅವರು ಹೀಗೆ ಭಿನ್ನವಿಸಿದರು "ನನ್ನ ಪ್ರಭೂ, ನಾನು ನನ್ನ ಜನಾಂಗದವರನ್ನು ಹಗಲಿರುಳೆನ್ನದೆ ಕರೆದೆನು.

ಆದರೆ ನನ್ನ ಕರೆಯು ಅವರ ಪಲಾಯನವನ್ನು ಮಾತ್ರ ಹೆಚ್ಚಿಸಿತು.

ನೀನು ಅವರನ್ನು ಕ್ಷಮಿಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲಾ ಅವರು ಕಿವಿಗಳಲ್ಲಿ ಬೆರಳುಗಳನ್ನು ತುರುಕಿಸಿಕೊಂಡರು, ತಮ್ಮ ವಸ್ತ್ರಗಳಿಂದ ಮುಖಮುಚ್ಚಿಕೊಂಡರು, ಹಠಮಾರಿತನ ತೋರಿದರು ಮತ್ತು ಭಾರೀ ಅಹಂಭಾವ ತೋರಿಸಿದರು.

ತರುವಾಯ ನಾನು ಅವರಿಗೆ ಬಹಿರಂಗವಾಗಿ ಕರೆಕೊಟ್ಟೆನು.

ಅನಂತರ ನಾನು ಘಂಟಾಘೋಷವಾಗಿ ಧರ್ಮಾಹ್ವಾನ ನೀಡಿದೆನು ಮತ್ತು ರಹಸ್ಯವಾಗಿಯೂ ಸಮಜಾಯಿಸಿದೆನು

ನಾನು (ಹೀಗೆ) ಹೇಳಿದೆನು : ನಿಮ್ಮ ಪ್ರಭುವಿನೊಡನೆ ಕ್ಷಮಯಾಚನೆ ಮಾಡಿರಿ. ಖಂಡಿತವಾಗಿಯೂ ಅವನು ಮಹಾಕ್ಷಮಾಶೀಲನಾಗಿದ್ದಾನೆ.

ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಳವಾಗಿ ಮಳೆ ಸುರಿಸುವನು

ನಿಮಗೆ ಸೊತ್ತು ಸಂತಾನಗಳನ್ನು ದಯಪಾಲಿಸುವನು ನಿಮಗಾಗಿ ಉದ್ಯಾನಗಳನ್ನು ಸೃಷ್ಟಿಸುವನು ಮತ್ತು ನಿಮಗಾಗಿ ಕಾಲುವೆಗಳನ್ನು ಹರಿಸುವನು

ನೀವು ಅಲ್ಲಾಹನ ಬಗ್ಗೆ ಯಾವುದೇ ಪ್ರತಿಷ್ಠೆಯನ್ನು ನಿರೀಕ್ಷಿಸದಿರಲು ನಿಮಗೇನಾಗಿದೆ?

ಅವನಂತು ನಿಮ್ಮನ್ನು ವಿವಿಧ ಹಂತಗಳಲ್ಲಿ ಸೃಷ್ಟಿಸಿರುವನು?

ಅಲ್ಲಾಹನು ನೂಹ್(ಅ)ರವರ ಮೂಲಕ ತನ್ನ ಕೆಲವು ಗುಣ ವಿಶೇಷಣಗಳನ್ನು ಬಹಿರಂಗ ಪಡಿಸುತ್ತಾನೆ. "ಅಲ್ಲಾಹನೇ ಅವರಿಗೆ ಉಪಜೀವನದ ವ್ಯವಸ್ಥೆಯನ್ನೂ, ಸಂಪತ್ತಿನಲ್ಲಿ ಸಮೃದ್ಧಿಯನ್ನೂ ಅಭಿವೃದ್ಧಿಯನ್ನೂ ನೀಡುತ್ತಾನೆ. ಅವನೇ ಅವರಿಗೆ ದೊಡ್ಡ ದೊಡ್ಡ ಅನುಗ್ರಹಗಳನ್ನು ದಯಪಾಲಿಸುತ್ತಾನೆ. ಆರಾಧನೆಗೆ ಮತ್ತು ಅವಲಂಬನೆಗೆ ಅರ್ಹನಾದವನು ಅವನು ಮತ್ತು ಸರ್ವಸ್ತುತಿಗಳೂ ಅವನಿಗೆ ಮೀಸಲಾಗಿದೆ."

**ಹೂದ್(ಅ)ರವರ ಸಂದೇಶ ಪ್ರಚಾರ ಮತ್ತು ಅವರ ಜನಾಂಗದ ಪ್ರತಿಕ್ರಿಯೆ:**

ಅಲ್ಲಾಹು ತನ್ನ ಪವಿತ್ರ ಗ್ರಂಥದಲ್ಲಿ ಹೂದ್(ಅ) ಮತ್ತು ಅವರ ಜನಾಂಗಗಳ ಕುರಿತು ಶುಅರಾಅ ಅಧ್ಯಾಯದಲ್ಲಿ ಹೇಳುತ್ತಾನೆ,

كَذَّبَتْ عَادٌ الْمُرْسَلِيْنَ •اِذْقَالَ لَهُمْ هُوْدٌ اَلَا تَتَّقُوْنَ •اِنِّىْ لَكُمْ رَسُوْلٌ اَمِيْنٌ• فَاتَّقُوااللّٰهَ وَاَطِيْعُوْنِ • وَمَااَسْئَلُكُمْ عَلَيْهِ مِنْ اَجْرٍاِنْ اَجْرِىَ اِلَّا عَلٰى رَبِّ الْعَالَمِيْنَ • اَتَبْنُوْنَ بِكُلِّ رِيْعٍ اٰيَةً تَعْبَثُوْنَ• وَتَتَّخِذُوْنَ مَصَانِعَ لَعَلَّكُمْ تَخْلُدُوْنَ• وَاِذَابَطَشْتُمْ بَطَشْتُمْ جَبَّارِيْنَ• فَاتَّقُوااللّٰهَ وَاَطِيْعُوْنِ • وَاتَّقُوْاالَّذِىْ اَمَدَّكُمْ بِمَاتَعْلَمُوْنَ• اَمَدَّكُمْ بِاَنْعَامٍ وَّبَنِيْنَ•وَجَنّٰتٍ وَّعُيُوْنٍ• اِنِّىْ اَخَافُ عَلَيْكُمْ عَذَابَ يَوْمٍ عَظِيْمٍ•(سورة الشعراء، الآيات ١٢٣ـ ١٣٥)

"ಆದ್(ಜನಾಂಗವು) ರಸೂಲರನ್ನು ಸುಳ್ಳಾಗಿಸಿತು. ಅವರ ಸಹೋದರ ಹೂದರು ಅವರೊಡನೆ ಹೇಳಿದ್ದ ಸಂದರ್ಭವನ್ನು ಸ್ಮರಿಸಿರಿ. "ನೀವೇನು ಭಯಪಡುವುದಿಲ್ಲವೇ? ನಾನು ನಿಮ್ಮ ಪಾಲಿಗೆ ಓರ್ವ ಪ್ರಾಮಾಣಿಕ ಸಂದೇಶವಾಹಕನಾಗಿರುತ್ತೇನೆ. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ಅನುಸರಿಸಿರಿ. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನ್ನು ಬಯಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇದೆ. ಇದೇನು ನೀವು ಪ್ರತಿಯೊಂದು ಉನ್ನತ ಸ್ಥಳದಲ್ಲಿ ವ್ಯಥಾ ಒಂದು ಸ್ಮಾರಕ ಕಟ್ಟಡವನ್ನು ಕಟ್ಟುತ್ತೀರಿ ಮತ್ತು ನಿಮಗೆ ಸದಾ ಇಲ್ಲೇ ಉಳಿಯಲಿಕ್ಕಿದೆಯೋ ಎಂಬಂತೆ ದೊಡ್ಡ ದೊಡ್ಡ ಸೌಧಗಳನ್ನು ನಿರ್ಮಿಸುತ್ತೀರಿ ಮತ್ತು ಯಾರಮೇಲಾದರೂ ಕೈ ಹಾಕುವಾಗ ಮದವೇರಿದವರಂತೆ ಕೈ ಹಾಕುತ್ತೀರಿ. ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ. ನೀವು ತಿಳಿದಿರುವ ವಸ್ತುಗಳನ್ನೆಲ್ಲ ನಿಮಗೆ ಕೊಟ್ಟಿರುವಾತನನ್ನು ಭಯಪಡಿರಿ. ಅವನು ನಿಮಗೆ ಪ್ರಾಣಿಗಳನ್ನು ಕೊಟ್ಟನು. ಸಂತತಿ ಕೊಟ್ಟನು.

ತೋಟಗಳನ್ನು ಚಿಲುಮೆಗಳನ್ನೂ ಕೊಟ್ಟನು. ನನಗೆ ನಿಮ್ಮ ವಿಷಯದಲ್ಲಿ ಒಂದು ಮಹಾದಿನದ ಯಾತನೆಯ ಭಯವಿದೆ''(26:123-135)

ಈ ಪ್ರಕಾರ ಸರ್ವಶಕ್ತನಾದ ಅಲ್ಲಾಹನು ಹೂದ್(ಅ)ರವರ ಮೂಲಕ ಅವರ ಜನಾಂಗಕ್ಕೆ ತನ್ನ ಅನುಗ್ರಹಗಳನ್ನು ವಿವರಿಸಿಕೊಟ್ಟನು. ಅದರೊಂದಿಗೆ ಸರ್ವರನ್ನೂ ಸಂರಕ್ಷಿಸುತ್ತಿರುವವನು, ಸೃಷ್ಟಿಸಿದವನೂ ತಾನೆಂದು ತಿಳಿಸಿಕೊಟ್ಟನು. ಆದ್ದರಿಂದ ನೀವೆಲ್ಲರೂ ನನ್ನ ಮುಂದೆ ಬಾಗಬೇಕೆಂದೂ ನನ್ನ ಭಯವಿರಿಸಿಕೊಳ್ಳಬೇಕೆಂದೂ ತಾಕೀತು ಮಾಡಿದನು. ತನ್ನ ಸಂದೇಶವಾಹಕರನ್ನು ಅನುಸರಿಸಬೇಕೆಂದೂ ಅವರ ಮೇಲೆ ವಿಶ್ವಾಸವಿರಿಸಬೇಕೆಂದೂ ಆದೇಶ ನೀಡಿದನು. ಆದರೂ ಆ ಜನರು ಈ ಮಾತುಗಳನ್ನೂ ಸಂದೇಶಗಳನ್ನೂ ತಿರಸ್ಕರಿಸಿದರು ಮತ್ತು ಅಹಂಕಾರ ಪ್ರದರ್ಶಿಸಿದರು. ಆದ್ದರಿಂದ ಇವರ ಮೇಲೆ ಅಲ್ಲಾಹನ ಶಿಕ್ಷೆಯು ಅನಿವಾರ್ಯವೆನಿಸಿತು. ಭಯಂಕರ ಚಂಡಮಾರುತದ ರೂಪದಲ್ಲಿ ಅಲ್ಲಾಹನ ಕ್ರೋಧವು ಅವರ ಮೇಲೆರಗಿತು.

**ಸ್ವಾಲಿಹ್(ಅ)ರವರ ಸಂದೇಶ ಪ್ರಚಾರ ಮತ್ತು ಅವರ ಸಮೂಹದ ಪ್ರತಿಕ್ರಿಯೆ:**

ಅಲ್ಲಾಹನು ತನ್ನ ಪರಿಶುದ್ಧ ಗ್ರಂಥದಲ್ಲಿ ಸ್ವಾಲಿಹ್(ಅ)ರವರ ಕುರಿತು ಉಲ್ಲೇಖಿಸುತ್ತಾ ಹೇಳುತ್ತಾನೆ.

**اِنِّىۡ لَكُمۡ رَسُوۡلٌ اَمِيۡنٌ • فَا تَّقُوا اللّٰهَ وَاَطِيۡعُوۡنِ • وَمَاۤ اَسۡـَٔلُكُمۡ عَلَيۡهِ مِنۡ اَجۡرٍ‌ ۚ اِنۡ اَجۡرِىَ اِلَّا عَلٰى رَبِّ الۡعٰلَمِيۡنَ • اَتُتۡرَكُوۡنَ فِىۡ مَا هٰهُنَاۤ اٰمِنِيۡنَ • فِىۡ جَنّٰتٍ وَّعُيُوۡنٍ • وَّزُرُوۡعٍ وَّنَخۡلٍ طَلۡعُهَا هَضِيۡمٌ‌ • وَتَنۡحِتُوۡنَ مِنَ الۡجِبَالِ بُيُوۡتًا فٰرِهِيۡنَ‌ • فَاتَّقُوا اللّٰهَ وَاَطِيۡعُوۡنِ‌ • وَلَا تُطِيۡعُوۡۤا اَمۡرَ الۡمُسۡرِفِيۡنَ • الَّذِيۡنَ يُفۡسِدُوۡنَ فِى الۡاَرۡضِ وَلَا يُصۡلِحُوۡنَ •** (سورة الشعراء،الآيات ١٤١-١٥٢)

**"ಸಮೂದ್ (ಜನಾಂಗವು) ರಸೂಲರನ್ನು ಸುಳ್ಳಾಗಿಸಿತು. ಅವರ ಸಹೋದರ ಸಾಲಿಹರು ಅವರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ. "ನೀವು ಭಯಪಡುವುದಿಲ್ಲವೇ? ನಾನು ನಿಮ್ಮ ಪಾಲಿಗೆ ಒಬ್ಬ ಪ್ರಾಮಾಣಿಕ ಸಂದೇಶವಾಹಕನಾಗಿರುತ್ತೇನೆ. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವುದೇ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕದ ಪಾಲಕ ಪ್ರಭುವಾದ ಅಲ್ಲಾಹನ ಬಳಿ ಇದೆ. ನೀವು ಇಲ್ಲಿರುವ ಸಕಲ ವಸ್ತುಗಳ ಮಧ್ಯೆ ಹೀಗೆಯೇ ನಿಶ್ಚಿಂತರಾಗಿ ಉಳಿದುಕೊಂಡಿರಲು ನಿಮ್ಮನ್ನು ಬಿಟ್ಟು ಬಿಡಲಾಗುವುದೇ?''**(26:141-146)

ಆ ಪ್ರಕಾರ ಸಾಲಿಹ್(ಅ) ಅಲ್ಲಾಹನು ಸೂಚಿಸಿದಂತೆ ಕೆಲವು ಮಾತುಗಳನ್ನು ಅವರ ಸಮುದಾಯದ ಮುಂದಿಟ್ಟರು. ಅಲ್ಲಾಹನೇ ಸರ್ವರನ್ನೂ ಸರ್ವವನ್ನೂ ಸೃಷ್ಟಿಸಿದವನೆಂದೂ, ಅವನೇ ಸರ್ವರೀತಿಯ ಅನುಗ್ರಹಗಳನ್ನು ದಯಪಾಲಿಸುತ್ತಾನೆಂದೂ ಸಾರಿ ಹೇಳುತ್ತಾ, ಆ ಮಹಾ ಮಹಿಮನಾದ ಅಲ್ಲಾಹನ ಕಡೆಗೇ ಶ್ರದ್ಧೆ ಹರಿಸಬೇಕೆಂದು ಕರೆ ನೀಡಿದರು. ಸೃಷ್ಟಿಕರ್ತನಾದ ಏಕೈಕ

ಆರಾಧ್ಯನನ್ನು ಆರಾಧಿಸುವ ನೆಲೆಯಲ್ಲಿ ಅವನ ಸಂದೇಶವಾಹಕನಾದ ನನ್ನನ್ನು ಅನುಸರಿಸಿರೆಂದೂ ಉಪದೇಶಿಸಿದರು. ಸೀಮೊಲ್ಲಂಘನೆ ಮಾಡುವವರನ್ನೂ, ಭೂಮಿಯಲ್ಲಿ ಕ್ಷೋಭೆ ಹರಡುವವರನ್ನು ಅನುಸರಿಸಬೇಡಿರಿ ಎಂದವರು ಎಚ್ಚರಿಸಿದರು. ಆದರೆ ಆ ಸಮುದಾಯವು ಅವರ ಮಾತುಗಳನ್ನು ಆಲಿಸಲಿಲ್ಲ. ಅವರ ಉಪದೇಶಗಳಿಗೆ ಕಿವಿಕೊಡಲಿಲ್ಲ. ಎಚ್ಚರಿಕೆಗಳನ್ನು ಪರಿಗಣಿಸಲೇ ಇಲ್ಲ. ಅವರು ತಮ್ಮ ಹಟ, ಪಥಭ್ರಷ್ಟತೆ ಮತ್ತು ಧಿಕ್ಕಾರದಲ್ಲೇ ಸ್ಥಿರವಾಗಿ ಬಿಟ್ಟರು. ಅಂತಿಮವಾಗಿ ಅಲ್ಲಾಹನ ಶಿಕ್ಷೆಯು ಅವರನ್ನು ಆವರಿಸಿಯೇ ಬಿಟ್ಟಿತು. ಅವರ ಅವಶೇಷವೂ ಉಳಿಯದಂತೆ ಅವರು ನಾಶಹೊಂದಿದರು.

**ಅಲ್ಲಾಹನು ಇಬ್ರಾಹೀಮ್(ಅ)ರವರ ಮೂಲಕ ಬಹಿರಂಗ ಪಡಿಸಿದ ತನ್ನ ವಿಶೇಷಣಗಳು :**

ಅಲ್ಲಾಹನು ಪವಿತ್ರ ಕುರ್‌ಆನಿನ ಸೂರತು ಶ್ಶುಅರಾಅ್‌ನಲ್ಲಿ ಹೇಳುತ್ತಾನೆ,

وَاتْلُ عَلَيْهِمْ نَبَأَ إِبْرَاهِيمَ • إِذْ قَالَ لِأَبِيهِ وَقَوْمِهِ مَا تَعْبُدُونَ • قَالُوا نَعْبُدُ أَصْنَامًا فَنَظَلُّ لَهَا عَاكِفِينَ • قَالَ هَلْ يَسْمَعُونَكُمْ إِذْ تَدْعُونَ • أَوْ يَنفَعُونَكُمْ أَوْ يَضُرُّونَ • (سورة الشعراء، الآيات ٦٩-٧٣)

**"ಅವರಿಗೆ ಇಬ್ರಾಹೀಮರ ವೃತ್ತಾಂತವನ್ನು ತಿಳಿಸಿರಿ. ಅವರು ತಮ್ಮ ತಂದೆ ಮತ್ತು ಜನಾಂಗದೊಂದಿಗೆ" ನೀವು ಇದೆಂತಹ ವಸ್ತುಗಳನ್ನು ಪೂಜಿಸುತ್ತಿರುವಿರಿ" ಎಂದ ಕೇಳಿದಾಗ ಅವರು "ಇವು ಕೆಲವು ವಿಗ್ರಹಗಳು, ನಾವು ಇವುಗಳನ್ನು ಪೂಜಿಸುತ್ತೇವೆ ಎಂದರು. ಆಗ ಇವರು ಕೇಳಿದರು, "ನೀವು ಇವುಗಳನ್ನು ಕರೆದು ಪ್ರಾರ್ಥಿಸಿದಾಗ ಇವು ಕೇಳುತ್ತವೆಯೇ? ಅಥವಾ ಇವು ನಿಮಗೇನಾದರೂ ಲಾಭವನ್ನಾಗಲೀ ಹಾನಿಯನ್ನಾಗಲಿ ಉಂಟು ಮಾಡುತ್ತದೆಯೇ?"**

(26:69-73)

**ವಿಗ್ರಹಗಳು ಜಡವಸ್ತುಗಳಾಗಿವೆ, ಆಲಿಸಲೊ-ಉಪಕರಿಸಲೊ ಅವುಗಳಿಗೆ ಸಾಧ್ಯವಿಲ್ಲ. ಹೀಗಿದ್ದೂ ಅವುಗಳು ಆರಾಧ್ಯರೆನಿಸಿಕೊಳ್ಳುವುದು ಹೇಗೆ? ಈ ಪರಿಸ್ಥಿತಿಯಲ್ಲಿ ಸ್ವಲ್ಪ ಹೊತ್ತು ನಿಂತು ಆಲೋಚಿಸಿಕೊಳ್ಳುವುದು ಅಗತ್ಯವಾಗಿದೆ. ಸೃಷ್ಟಿಕರ್ತನಾದ ಅಲ್ಲಾಹನು ಮೇಲಿನ ವಚನದಲ್ಲಿ** ವಿಗ್ರಹಗಳು ಆರಾಧನೆಗೆ ಅರ್ಹವಾದುದವಲ್ಲವೆಂದು ಘೋಷಿಸಿ ಬಿಟ್ಟಿದ್ದಾನೆ. ಏಕೆಂದರೆ ಅವುಗಳು ಆಲಿಸುವುದೂ ಇಲ್ಲ. ತನ್ನನ್ನು ಪ್ರತೀಕ್ಷಿಸುವವರಿಗೆ ಪ್ರತ್ಯುತ್ತರಿಸುವುದೂ ಇಲ್ಲ. ಅವುಗಳಿಂದ ಲಾಭ ದೊರಕಿಸಿ ಕೊಡಲೂ ಸಾಧ್ಯವಿಲ್ಲ, ನಷ್ಟ ಉಂಟು ಮಾಡುವ ಸಾಮರ್ಥ್ಯವೂ ಇಲ್ಲ. ಏಕೆಂದರೆ ಅವುಗಳು ಜಡವಸ್ತುಗಳಾಗಿವೆ. ಅವುಗಳಿಗೆ ಅವುಗಳನ್ನು ಆರಾಧನೆ ಮಾಡುವವರ ಪರಿಚಯವೊ, ಅವರ ಅಂತರಂಗ ಅಥವಾ ಬಹಿರಂಗದ ಅರಿವೊ ಇರುವುದಿಲ್ಲ. ಆದರೂ ನೈಜವಾದ ಸೃಷ್ಟಿಕರ್ತನನ್ನು ತೊರೆದು ತಾವೇ ಸೃಷ್ಟಿಸಿದ ಜಡವಾದ ಪ್ರತಿಮೆಗಳನ್ನು ಆರಾಧಿಸುವುದಕ್ಕೆ ಏನು ಹೇಳಬೇಕು? ಇದಕ್ಕಾಗಿಯೇ ಇಬ್ರಾಹೀಮ್(ಅ) ಹೇಳಿದರು,

”هَـلْ يَسْـمَعُوْنَكُمْ اِذْتَدْعُوْنَ • اَوْيَـنْفَعُوْنَكُمْ اَوْيَضُرُّوْنَ“ (سورة الشعراء ،الآيتان ٧٢-٧٣)

**“ನೀವು ಇವುಗಳನ್ನು ಕರೆದು ಪ್ರಾರ್ಥಿಸಿದರೆ ಅವು ಕೇಳುತ್ತವೆಯೇ? ಅಥವಾ ಇವು ನಿಮಗೇನಾದರೂ ಲಾಭವನ್ನಾಗಲೀ ನಷ್ಟವನ್ನಾಗಲಿ ಉಂಟು ಮಾಡುತ್ತವೆಯೇ?**

ಈ ಪ್ರಶ್ನೆಗೆ ಅವರ ಜನತೆ ಅವರಿಗೆ ನೀಡಿದ ಉತ್ತರವೇನು? ಏನೂ ಇಲ್ಲ! ಅವರಂತೂ ಆ ಸಂದರ್ಭದಲ್ಲಿ ಸ್ತಬ್ಧರಾಗಿ ಬಿಟ್ಟರು. ಉತ್ತರ ನೀಡಲ ಸಾಧ್ಯವಾಗದಿದ್ದಾಗ ಅವರು ಮರ್ದನಕ್ಕೆ ತೊಡಗಿದರು. ಏಕೆಂದರೆ, ಅವರಿಗೆ ಅವರ ಆರಾಧ್ಯರು ಲಾಭವನ್ನೊ, ನಷ್ಟವನ್ನೋ ಉಂಟು ಮಾಡಲಾರರೆಂದು ಸ್ಪಷ್ಟವಾಗಿ ತಿಳಿದಿತ್ತು. ಅವುಗಳು ತಮ್ಮ ಮುಂದೆ ಅಹವಾಲು ಹೇಳುವವರನ್ನು ಕಾಣುವುದಾಗಲಿ, ಕೇಳುವುದಾಗಲಿ ಮಾಡುವುದಿಲ್ಲ. ಅವುಗಳಿಂದ ಯಾವುದೇ ಪ್ರತ್ಯುತ್ತರ ಲಭಿಸುವುದಿಲ್ಲ ಎನ್ನುವುದು ಅವರಿಗೆ ಖಾತ್ರಿಯಾಗಿತ್ತು ಆದ್ದರಿಂದಲೇ ಅವರು ಹೇಳಿದರು,

”بَـلْ وَجَـدْ نَـا آبَاءَ نَاكَذٰلِكَ يَفْعَلُوْنَ“(سورة الشعراء، الآية ٧٤)

**“ಇಲ್ಲ, ಆದರೆ ನಮ್ಮ ಪೂರ್ವಿಕರು ಹೀಗೆಯೇ ಮಾಡುತ್ತಿರುವುದನ್ನು ನಾವು ಕಂಡಿದ್ದೇವೆ”**
(26-74)

ಅವರು ಅವರ ಆರಾಧ್ಯರಾದ ವಿಗ್ರಹಗಳು ಆಲಿಸುವುದೆಂದೊ, ಅವುಗಳು ಲಾಭವನ್ನೋ ನಷ್ಟವನ್ನೋ ಉಂಟುಮಾಡುತ್ತವೆಂದೊ ಹೇಳಲೇ ಇಲ್ಲ. ಬದಲಾಗಿ, ಅವರು ಹಾರಿಕೆಯ ಉತ್ತರವನ್ನಷ್ಟೇ ನೀಡಿದರು. ಇದರಿಂದ ಅವರ ಅಂತರಾಳದಲ್ಲಿ ಕೂಡಾ ಈ ವಿಗ್ರಹಗಳಿಗೆ ಆರಾಧಿಸಲ್ಪಡುವ ಅರ್ಹತೆಗಳಿಲ್ಲವೆನ್ನುವುದು ಸ್ಪಷ್ಟವಾಗಿರುವುದು ಗೋಚರಿಸುತ್ತದೆ. ಆದ್ದರಿಂದಲೇ ಅವರು ಉತ್ತರಿಸಿದ್ದು

’بَلْ وَجَدْ نَا آبَاءَ نَاكَذٰلِكَ يَفْعَلُوْنَ“ (سورة الشعراء، الآية ٧٤)

**“ಇಲ್ಲ! ಆದರೆ ನಮ್ಮ ಪೂರ್ವಿಕರು ಹೀಗೆಯೇ ಮಾಡುತ್ತಿರುವುದನ್ನು ನಾವು ಕಂಡಿದ್ದೇವೆ”**
(26-74)

ಅಂದರೆ, ನಾವು ನಮ್ಮ ತಂದೆ-ತಾತ-ಮುತ್ತಾತಂದಿರು ಸ್ವೀಕರಿಸಿದ ಆರಾಧ್ಯರನ್ನು ಆರಾಧಿಸುತ್ತಾ ಬರುತ್ತಿದ್ದೇವೆ. ನೀನು ಹೇಳುವ ಮಾತುಗಳು ನಮ್ಮ ಹಿರಿಯರ ಸಂಪ್ರದಾಯಕ್ಕೆ ವಿರುದ್ಧವಾಗಿರುವುದಾಗಿದೆ. ಇದೇ ಸಂಗತಿಯು ಇತರ ಕೆಲವು ವಚನಗಳಲ್ಲೂ ಉಲ್ಲೇಖಗೊಂಡಿದೆ.

ಅಲ್ಲಾಹು ಹೇಳುತ್ತಾನೆ,

اِنَّـا وَجَـدْنَـا اٰبَـآءَ نَـا عَـلٰى اُمَّةٍ وَاِنَّا عَلٰى اٰثَارِهِمْ مُقْتَدُوْنَ(سورة الزخرف، الآية ٢٣)

**"ನಮ್ಮ ಪೂರ್ವಜರು ಒಂದು ಪದ್ಧತಿಯಲ್ಲಿದ್ದುದಾಗಿ ನಾವು ಕಂಡಿದ್ದೇವೆ ಮತ್ತು ನಾವು ಅವರ ಹೆಜ್ಜೆ ಗುರುತುಗಳನ್ನೇ ಅನುಸರಿಸುತ್ತೇವೆ" ಎಂದೇ ಹೇಳಿದ್ದರು"**(43-23)

ಇದು ವಾಸ್ತವದಲ್ಲಿ ಒಂದು ಕೆಟ್ಟ ಸಂಪ್ರದಾಯವಾಗಿದೆ. ದೇವದಿಕ್ಕಾರಿಯಾದ ಶೈತಾನನ ಪ್ರೇರಣೆಗಳಿಂದ ಅವರು ಹೇಳುತ್ತಿರುವ ಮಾತಾಗಿದೆ. ಅವರು ತಮ್ಮ ಕರ್ಮಗಳಿಗೆ ಅವನ ಮಾರ್ಗವನ್ನು ಆರಿಸಿಕೊಂಡರು. ಅವನು ತೋರಿದ ಧಿಕ್ಕಾರದ ಮಾರ್ಗದಲ್ಲಿ ಸಂಚರಿಸ ತೊಡಗಿದರು. ನಾವು ಅಲ್ಲಾಹನೊಂದಿಗೆ ಪ್ರಾರ್ಥಿಸುತ್ತೇವೆ. ಅವನು ನಮ್ಮನ್ನು ಶೈತಾನನ ಪ್ರೇರಣೆಗಳಿಂದ ಸಂರಕ್ಷಿಸಲಿ.

**ಇಬ್ರಾಹೀಮ್(ಅ) ಮಿಥ್ಯ ಆರಾಧ್ಯರೊಂದಿಗೆ ವಿರೋಧ ಪ್ರಕಟಿಸಿದ ಬಗೆ:**

ಇಬ್ರಾಹೀಮ್(ಅ) ಅಲ್ಲಾಹೇತರ ಆರಾಧ್ಯರನ್ನು ತನ್ನ ಶತ್ರುಗಳೆಂದು ತಿಳಿದರು ಮತ್ತು ಅವುಗಳೊಂದಿಗೆ ತನ್ನ ವಿರೋಧ ಮತ್ತು ಧ್ವೇಷವನ್ನು ಬಹಿರಂಗ ಪಡಿಸಿದರು. ಬಳಿಕ ಅವುಗಳೊಂದಿಗೆ ಇಬ್ರಾಹಿಮ್(ಅ) ಅಭಿಸಂಬೋಧಿಸಿ ಹೇಳಿದರು.

"اَفَرَئَيْتُمْ مَا كُنْتُمْ تَعْبُدُوْنَ • اَنْتُمْ وَاٰبَائُكُمُ الْاَقْدَمُوْنَ • فَاِنَّهُمْ عَدُوٌّلِّىْ اِلَّا رَبَّ الْعٰلَمِيْنَ(سورة الشعراء الآيات ٧٥-٧٧)

**ಆಗ ಇಬ್ರಾಹೀಮ್(ಅ) ಕೇಳಿದರು, "ನೀವು ಮತ್ತು ನಿಮ್ಮ ಪೂರ್ವಿಕರು ಪೂಜಿಸುತ್ತಾ ಬಂದಿರುವ ವಸ್ತುಗಳನ್ನು ನೀವೇಂದಾದರೂ (ಕಣ್ತೆರೆದು) ನೋಡಿದ್ದುಂಟೇ? ಇವೆಲ್ಲವೂ ನನ್ನ ಶತ್ರುಗಳು. ಸರ್ವಲೋಕಗಳ ಪಾಲಕ ಪ್ರಭುವೊಬ್ಬನ ಹೊರತು"**(26:75-77)

ಇಲ್ಲಿ ಅವರು ಉದ್ದೇಶಿಸಿದ್ದು ಅವರ ಜನಾಂಗ ಆರಾಧ್ಯರೆಂದು ತಿಳಿದು ಪೂಜಿಸುತ್ತಿದ್ದ ವಿಗ್ರಹಗಳನ್ನಾಗಿತ್ತು ಆದ್ದರಿಂದಲೇ ಅವರು ಹೇಳಿದ್ದು,

"فَاِنَّهُمْ عَدُوٌّلِّىْ اِلَّا رَبَّ الْعَالَمِيْنَ' (سورة الشعراء الآية ٧٧)

**"ನಿಶ್ಚಯವಾಗಿಯೂ ಇವೆಲ್ಲವೂ ನನ್ನ ಶತ್ರುಗಳು, ಸರ್ವಲೋಕಗಳ ಪಾಲಕ ಪ್ರಭುವೊಬ್ಬನನ್ನು ಬಿಟ್ಟು"**(26-77) ಅವರ ಮಾತಿನಲ್ಲಿ ಪ್ರಕಟವಾದ اِلَّا رَبَّ الْعَالَمِيْنَ "ಸರ್ವಲೋಕಗಳ ಪ್ರಭುವೊಬ್ಬನ ಹೊರತು" ಎಂಬ ಉದ್ಘೋಷದಿಂದ ಅಂದಿನ ಜನತೆ ಅಲ್ಲಾಹನನ್ನು ಆರಾಧಿಸುತ್ತಿದ್ದರೆಂದೂ ಅವನೊಂದಿಗೆ ಇತರ ಆರಾಧ್ಯರನ್ನೂ ಕಲ್ಪಿಸಿಕೊಂಡಿದ್ದರೆಂದೂ ಇಬ್ರಾಹೀಮ್(ಅ) ಅರಿತಿದ್ದರೆನ್ನುವುದು ತಿಳಿದುಬರುತ್ತದೆ. ಆದ್ದರಿಂದಲೇ ಅವರು(ಅ) ಜನರು ಆರಾಧಿಸುತ್ತಿದ್ದ ಅಲ್ಲಾಹೇತರ ಆರಾಧ್ಯರು ತನ್ನ ಶತ್ರುಗಳೆಂದು ಸಾರಿ ಹೇಳಿದರು ಮತ್ತು اِلَّا رَبَّ الْعَالَمِيْنَ ಎಂದರು. (ರಬ್ಬುಲ್ ಆಲಮೀನ್‌ನ ಹೊರತು) ಇದೇ ಪ್ರಕಾರ ಮತ್ತೊಂದು ವಚನದಲ್ಲಿ

''اِلَّاالَّـــذِىْ فَطَرَنِىْ'' (سورة الزخرف الآية ٢٧)

**"ನನ್ನನ್ನು ಸೃಷ್ಠಿಸಿದವನ ಹೊರತು"** ಎಂದು ಉಲ್ಲೇಖಿಗೊಂಡಿದೆ. ತನ್ನ ತಂದೆ ಆಝರ್ ಮತ್ತು ತನ್ನ ಸಮುದಾಯದ ಮುಂದೆ ನಿಂತು ಧಿಟ್ಟತನದಿಂದ ಇಬ್ರಾಹೀಮ್(ಅ) ನನ್ನನ್ನು ಸೃಷ್ಠಿಸಿದ ನನ್ನ ಪ್ರಭುವಿನ ಹೊರತು ನೀವು ಪೂಜಿಸುವ ಇತರ ಎಲ್ಲಾ ಆರಾಧ್ಯರನ್ನೂ ನಾನು ವಿರೋಧಿಸುತ್ತೇನೆಂದು ಹೇಳಿದ್ದರು.

ಈ ವಚನಗಳಿಂದ ಇಬ್ರಾಹೀಮ್(ಅ)ರವರ ಕಾಲದ ಮುಶ್ರಿಕರು ಕೂಡಾ ಅಲ್ಲಾಹನನ್ನು ಆರಾಧಿಸುತ್ತಲೂ, ಅವನೊಂದಿಗೆ ಇತರ ಆರಾಧ್ಯರನ್ನು ಪೂಜಿಸುತ್ತಲೂ ಇದ್ದರೆನ್ನುವ ಅಂಶವು ಸ್ಪಷ್ಟವಾಗುತ್ತದೆ. ಆದರೆ, ಅಂದಿನ ಜನತೆ ಮತ್ತು ಅವರ ಪ್ರವಾದಿಗಳ ಮಧ್ಯೆ ಇದ್ದ ಭಿನ್ನಾಭಿಪ್ರಾಯವು ಆರಾಧನೆ ಕೇವಲ ಅಲ್ಲಾಹನಿಗೆ ಮಾತ್ರ ಸೀಮಿತವಾಗಿರಬೇಕು ಎನ್ನುವ ಕುರಿತಾಗಿತ್ತು ಎನ್ನುವುದೂ ವ್ಯಕ್ತವಾಗುತ್ತದೆ.

### ಇಬ್ರಾಹೀಮ್(ಅ) ಪ್ರತಿಪಾದಿಸಿದ ದೇವ ಪರಿಕಲ್ಪನೆ :

ಬಳಿಕ ಇಬ್ರಾಹೀಮ್(ಅ) ಅವರ ಸಮೂಹದ ಮುಂದೆ ಸಂರಕ್ಷಕನಾದ ಅಲ್ಲಾಹನನ್ನು ಪರಿಚಯಿಸಿದರು.

اَلَّـذِىْ خَلَقَنِىْ فَهُوَيَهْدِيْنِ •وَالَّـذِىْ هُوَيُطْعِمُنِىْ وَيَسْقِيْنِ • وَاِذَامَرِضْتُ فَهُوَيَشْفِيْنِ•وَالَّذِىْ يُمِيْتُنِىْ ثُمَّ يُحْيِيْنِ•(سورة الشعراء الآيات ٧٨-٨١)

**"ಅವನು ನನ್ನನ್ನು ಸೃಷ್ಠಿಸಿದನು ಮತ್ತು ಅವನೇ ನನಗೆ ಮಾರ್ಗದರ್ಶನ ನೀಡುತ್ತಾನೆ. ಅವನು ನನಗೆ ಉಣಿಸುತ್ತಾನೆ ಮತ್ತು ಕುಡಿಸುತ್ತಾನೆ. ನಾನು ಕಾಯಿಲೆ ಬಿದ್ದಾಗ ಅವನೇ ನನ್ನನ್ನು ಗುಣಪಡಿಸುತ್ತಾನೆ. ಅವನೇ ನನಗೆ ಮರಣ ಕೊಡುವನು ಮತ್ತು ಪುನಃ ಜೀವಂತಗೊಳಿಸುವನು"**

(26-78-81)

### ಆರಾಧಿಸಲ್ಪಡುವ ಹಕ್ಕು ಅಲ್ಲಾಹನಿಗಷ್ಟೇ ಇರುವುದೇಕೆ?

ಸರ್ವ ಶಕ್ತನಾದ ಅಲ್ಲಾಹನೇ ರೋಗಿಗಳಿಗೆ ಉಪಶಮನ ನೀಡುತ್ತಾನೆ, ಅವನೇ ಮರಣವನ್ನೂ ನೀಡುತ್ತಾನೆ. ಅವನೇ ಪುನರ್ ಜೀವ ನೀಡುತ್ತಾನೆ. ಅವನೇ ಉಣಿಸುತ್ತಾನೆ, ಕುಡಿಸುತ್ತಾನೆ ಮತ್ತು ಅವನು ಬಯಸುವವರಿಗೆ ಪತ್ಪಥವನ್ನೂ ತೋರಿಸುತ್ತಾನೆ. ಅವನೇ ಸರ್ವವನ್ನೂ ಸರ್ವರನ್ನೂ ಸೃಷ್ಠಿಸುವವನೂ, ಪಾಪಗಳನ್ನೂ ಮನ್ನಿಸುವವನು, ಕುಂದು-ಕೊರತೆಗಳನ್ನು ಮರೆಮಾಚುವವನು.

ಆದ್ದರಿಂದಲೇ ಅವನ ಸೃಷ್ಠಿಗಳು ಅವನನ್ನು ಮಾತ್ರ ಆರಾಧಿಸುವುದು ಅವಶ್ಯಕವೂ ಅನಿವಾರ್ಯವೂ ಆಗಿದೆ. ಆರಾಧನೆಗೆ ಅರ್ಹನಾದ ಅಲ್ಲಾಹನ ಹೊರತು ಇತರರನ್ನು ಆರಾಧಿಸುವ ಕರ್ಮಗಳು ವ್ಯರ್ಥವೂ-ನಿರರ್ಥಕವೂ ಆಗಿದೆ.

## ಮಿಥ್ಯ ಆರಾಧ್ಯರು ಪೂಜೆಗೆ ಹಕ್ಕುದಾರರಲ್ಲ

ಮಿಥ್ಯ ಆರಾಧ್ಯರು ನಮ್ಮ ಪೂಜೆ-ಪುರಸ್ಕಾರಗಳಿಗೆ ಹಕ್ಕುದಾರರಾಗಿರುವುದಿಲ್ಲ. ಏಕೆಂದರೆ, ಅವರು ಸೃಷ್ಟಿಕರ್ತರೂ ಅಲ್ಲ. ಅವರು ಆಹಾರವನ್ನು ಒದಗಿಸುವುದೂ ಇಲ್ಲ. ಲಾಭವೊ-ನಷ್ಟವೊ ಅವರಿಂದ ಸಾಧ್ಯವೇ ಇಲ್ಲ. ಅದೃಶ್ಯವಾದ ಯಾವುದೇ ಜ್ಞಾನವೂ ಅವರಿಗಿಲ್ಲ. ಅವರೊಂದಿಗೆ ಮೊರೆ ಇಡುವವರ ವಿಲಾಪವನ್ನು ಅವರು ಕಾಣುವುದೊ-ಆಲಿಸುವುದೋ ಅದಕ್ಕೆ ಪ್ರತಿಕ್ರಯಿಸುವುದೋ ಅವರು ಮಾಡುವುದಿಲ್ಲ.

ಅಲ್ಲಾಹನು ಹೇಳುವಂತೆ.

ذٰلِكُمُ اللّٰهُ رَبُّكُمْ لَهُ الْمُلْكُ • وَالَّذِيْنَ تَدْعُوْنَ مِنْ دُوْنِهٖ مَا يَمْلِكُوْنَ مِنْ قِطْمِيْرٍ • اِنْ تَدْعُوْهُمْ لَا يَسْمَعُوْا دُعَائَكُمْ وَلَوْ سَمِعُوْا مَا اسْتَجَابُوْا لَكُمْ وَيَوْمَ الْقِيَامَةِ يَكْفُرُوْنَ بِشِرْكِكُمْ •(سورة الفاطر،الآيتان١٣،١٤)

"ಅಲ್ಲಾಹನೇ ನಿಮ್ಮ ಪ್ರಭು ಸಾರ್ವಭೌಮತೆ ಅವನದೇ ಆಗಿರುತ್ತದೆ. ಅವನನ್ನು ಬಿಟ್ಟು ನೀವು ಇತರ ಯಾರನ್ನೆಲ್ಲ ಪ್ರಾರ್ಥಿಸುತ್ತಿರೋ ಅವರು ಒಂದು ಹುಲ್ಲು ಕಡ್ಡಿಯ ಒಡೆಯರೂ ಅಲ್ಲ. ನೀವು ಅವರನ್ನು ಪ್ರಾರ್ಥಿಸಿದರೆ, ಅವರು ನಿಮ್ಮ ಪ್ರಾರ್ಥನೆಗಳನ್ನು ಕೇಳಲಾರರು ಮತ್ತು ಕೇಳಿದರೂ ಅವುಗಳ ಉತ್ತರವನ್ನು ನಿಮಗೆ ಕೊಡಲಾರರು. ಪುನರುತ್ಥಾನದ ದಿನ ಅವರು ನೀವೆಸಗಿದ ದೇವ ಸಹಭಾಗಿತ್ವವನ್ನು ನಿರಾಕರಿಸಿ ಬಿಡುವರು. ವಸ್ತುಸ್ಥಿತಿಯ ಇಂತಹ ಸರಿಯಾದ ವಿವರವನ್ನು ನಿಮಗೆ ಓರ್ವ ವಿವರ ಪೂರ್ಣನಲ್ಲದೆ ಇನ್ನಾರೂ ಕೊಡಲಾರರು."(35:14)

**ಮಿಥ್ಯ ಶಕ್ತಿಗಳನ್ನು ಕರೆದು ಪ್ರಾರ್ಥಿಸಿದರೆ ಅವರು ಅದನ್ನು ಆಲಿಸುವುದೂ ಇಲ್ಲ-ಉತ್ತರಿಸುವುದೂ ಇಲ್ಲ. ಆದ್ದರಿಂದ ಮಿಥ್ಯ ಶಕ್ತಿಯನ್ನು ಸಂಕಲ್ಪಿಸಿಕೊಂಡು ಕರೆದು ಪ್ರಾರ್ಥಿಸುವುದು ಸುಸ್ಪಷ್ಟ ಶಿರ್ಕ್ ಆಗಿದೆ.**

ಪರಿಶುದ್ಧವಾದ ಅಲ್ಲಾಹನು ಮೇಲೆ ಉಲ್ಲೇಖಿಸಿದ ಆಯತ್‌ನ ಮೂಲಕ ಮಿಥ್ಯ ಆರಾಧ್ಯರ ಕುರಿತು ಸ್ಪಷ್ಟಪಡಿಸುತ್ತಾನೆ. ಅವರು ತನ್ನನ್ನು ಕರೆದು ಪ್ರಾರ್ಥಿಸುವವರ ಪ್ರಾರ್ಥನೆಗಳನ್ನು ಕೇಳಲಾರರು. ಅವರಿಗೆ ಉತ್ತರಿಸಲಾರರು ಎಂದು. ಅದರೊಂದಿಗೆ ಅಲ್ಲಾಹೇತರರನ್ನು ಕರೆದು ಪ್ರಾರ್ಥಿಸುವುದು ಅಲ್ಲಾಹನೊಂದಿಗೆ ಸಹಭಾಗಿಗಳನ್ನು ಸಂಕಲ್ಪಿಸುವುದಾಗಿದೆ ಎಂದೂ ಸ್ಪಷ್ಟಪಡಿಸುತ್ತಾನೆ.

وَيَوْمَ الْقِيَامَةِ يَكْفُرُوْنَ بِشِرْكِكُمْ (سورة الفاطر،الآية١٤)

**ನೀವು ಮಾಡಿದ ಶಿರ್ಕನ್ನು ಅವರು ನಿರಾಕರಿಸುತ್ತಾರೆ** ಎನ್ನುವ ಅಂಶವು ಅಲ್ಲಾಹೇತರರನ್ನು

ಪ್ರಾರ್ಥಿಸುವುದು ಶಿರ್ಕಾಗಿದೆ ಎನ್ನುವುದನ್ನು ಸುಸ್ಪಷ್ಟವಾಗಿ ಸಾರುತ್ತದೆ. ಆದ್ದರಿಂದ ಆ ಕುರಿತು ವಿಶೇಷ ಗಮನ ಹರಿಸಬೇಕಾಗಿದೆ.

**ಖಿಯಾಮತ್‍ನ ದಿನ ಪಾಪಗಳಿಗೆ ಕ್ಷಮೆ ನೀಡುವವನು ಅಲ್ಲಾಹನೇ ಆಗಿದ್ದಾನೆ :**

ಬಳಿಕ ಇಬ್ರಾಹೀಮ್(ಅ) ಹೇಳಿದರು,

**وَالَّذِىٓ اَطۡمَعُ اَنۡ يَّغۡفِرَلِىۡ خَطِيۡٓـئَتِىۡ يَوۡمَ الدِّيۡنِ(سورة الشعراء الآية٨٢)**

**"ಪ್ರತಿಫಲ ನೀಡಲಾಗುವ ಆ ದಿನ ಅವನು ನನ್ನ ತಪ್ಪುಗಳನ್ನು ಕ್ಷಮಿಸುವನೆಂದೂ ನಾನು ಅವನಿಂದ ನಿರೀಕ್ಷಿಸುತ್ತಿದ್ದೇನೆ"(26-82)**

ಅಂದರೆ `ನಾನು ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತೇನೆ, ಅವನು ಖಿಯಾಮತ್‍ನ ದಿನದಂದು ನನ್ನ ತಪ್ಪುಗಳನ್ನು ಕ್ಷಮಿಸುವನು. ಅವನೇ ನನಗೆ ಈ ಲೋಕದಲ್ಲೂ ಲಾಭವನ್ನುಂಟು ಮಾಡುವನು ಮತ್ತು ಪರಲೋಕದಲ್ಲಿ ಮುಕ್ತಿಯನ್ನು ನೀಡುವನು. ಆದರೆ ಈ ಪ್ರತಿಮೆಗಳು-ಗೋರಿಗಳು ಲೋಕದಲ್ಲೂ ಲಾಭವನ್ನು ನೀಡದು, ಪರಲೋಕದಲ್ಲೂ ಪ್ರಯೋಜನಕ್ಕೆ ಬರದು. ಬದಲಾಗಿ, ಇವುಗಳು ಸಹಾಯ ಬಯಸುವವರಿಗೆ ನಷ್ಟವನ್ನಷ್ಟೇ ಉಂಟು ಮಾಡುತ್ತದೆ. ಅಂದರೆ, ಶಿಕ್ಷೆ ಮತ್ತು ಯಾತನೆಯ ಕೂಪಕ್ಕೆ ದೂಡಿ ಬಿಡುವುದು.

ಅಲ್ಲಾಹನು ತನ್ನ ಮಿತ್ರ ಇಬ್ರಾಹೀಮ್(ಅ)ರವರ ಕುರಿತು ಹೇಳುತ್ತಾನೆ,

**وَالَّـذِىٓ اَطۡـمَـعُ اَنۡ يَّـغۡـفِرَلِىۡ خَطِيۡٓـئَتِىۡ يَوۡمَ الدِّيۡنِ•رَبِّ هَبۡ لِىۡ حُـكۡـمـاً وَّاَلۡـحِـقۡـنِىۡ بِالصّٰلِحِيۡنِ• وَاجۡـعَـلۡ لِّـىۡ لِسَانَ صِدۡقٍ فِى الۡاٰخِـرِيۡنِ• وَاجۡـعَـلۡـنِـىۡ مِـنۡ وَّرَثَةِ جَنَّةِ النَّعِيۡمِ •(سـورـة الشعراء الآيات٨٢. ٨٥)**

**"ಪ್ರತಿಫಲ ನೀಡಲಾಗುವ ಆ ದಿನ ಅವನು ನನ್ನ ತಪ್ಪುಗಳನ್ನು ಕ್ಷಮಿಸುವನೆಂದು ನಾನು ಅವನಿಂದ ನಿರೀಕ್ಷಿಸುತ್ತಿದ್ದೇನೆ ಎಂದು ಅವರು ಹೇಳಿದರು, (ಬಳಿಕ ಅವರು ಹೇಗೆ ಪ್ರಾರ್ಥಿಸಿದರು) ನನ್ನ ಪ್ರಭೂ, ನನಗೆ ನಿರ್ಧಾರ ಶಕ್ತಿ ನೀಡು ಮತ್ತು ನನ್ನನ್ನು ಸಜ್ಜನರೊಂದಿಗೆ ಸೇರಿಸು, ಮುಂದಿನ ಪೀಳಿಗೆಯಲ್ಲಿ ನನಗೆ ಸತ್ಕೀರ್ತಿಯನ್ನು ದಯಪಾಲಿಸು ಮತ್ತುಸಂಪದ್ಭರಿತವಾದ ಸ್ವರ್ಗದ ಉತ್ತರಾಧಿಕಾರಿಗಳಲ್ಲಿ ನನ್ನನ್ನು ಸೇರಿಸು"(26:82-85)**

**ಪರಲೋಕಕ್ಕೆ ಪ್ರವೇಶಿಸಲಿರುವುದು ನಿಶ್ಚಿತ**

ಇಲ್ಲಿ ಉಲ್ಲೇಖಿಸಲಾದ ಎಲ್ಲಾ ವಚನಗಳೂ ಪರಲೋಕದ ಕುರಿತು ವಿಶ್ವಾಸ ಗಳಿಸಲು, ಆ ಕುರಿತು ಎಚ್ಚರಿಸಲು ಮತ್ತು ಆ ಕುರಿತು ಸಂದೇಶ ನೀಡಲು ಪ್ರರ್ಯಾಪ್ತವಿದೆ. ಪರಲೋಕವೆನ್ನುವುದು

ನಿಶ್ಚಿತ, ಅಲ್ಲಿಗೆ ಪ್ರತಿಯೊಬ್ಬರೂ ಹೋಗಬೇಕಾಗಿರುವುದು ಅನಿವಾರ್ಯ. ಅಲ್ಲಿ ಪ್ರತಿಫಲ-ಶಿಕ್ಷೆ ಮತ್ತು ಲೆಕ್ಕಾಚಾರವಿದೆ ಎನ್ನುವುದನ್ನು ಈ ವಚನಗಳು ದೃಢೀಕರಿಸುತ್ತದೆ.

ಇಬ್ರಾಹೀಮ್(ಅ) ಹೇಳುವುದು ನೋಡಿ.

وَاجْعَلْنِىْ مِنْ وَّرَثَةِ جَنَّةِ النَّعِيْمِ وَاغْفِرْلاَبِىْ اِنَّهٗ كَانَ مِنَ الضَّالِّيْنَ(سورة الشعراء، الآيتان ٨٥،٨٦)

"ಮತ್ತು ನನ್ನನ್ನು ಸಂಪತ್ಭರಿತವಾದ ಸ್ವರ್ಗದ ಉತ್ತರಾಧಿಕಾರಿಗಳಲ್ಲಿ ಸೇರಿಸು. ನನ್ನ ತಂದೆಗೆ ಕ್ಷಮೆ ನೀಡು. ನಿಜಕ್ಕೂ ಅವರು ಪಥಭ್ರಷ್ಟರಲ್ಲಾಗಿದ್ದಾರೆ"(26-85, 86)

ಇಬ್ರಾಹೀಮ್(ಅ)ರವರು ತನ್ನ ತಂದೆಯ ಅವಸ್ಥೆ ಏನೆಂದು ಅರಿಯುವ ಮೊದಲೇ ಅವರ ಕ್ಷಮೆಗಾಗಿ ಪ್ರಾರ್ಥಿಸಿದರು. ಅದೇ ಅವರಿಗೆ ತನ್ನ ತಂದೆಯ ಅವಸ್ಥೆಯ ಕುರಿತು ಅರಿವಾದಾಗ ಅವರ ಕುರಿತು ನೈಪುಣ್ಯತೆ ಉಪಯೋಗಿಸಿದರು. ಸೂರಃ ಅಂಕಬೂತ್‌ನಲ್ಲಿ ನೋಡಿ.

وَاِبْرَاهِيْمَ اِذْقَالَ لِقَوْمِهِ اعْبُدُوااللّٰهَ وَ اتَّقُوْهُ ذٰلِكُمْ خَيْرٌلَّكُمْ اِنْ كُنْتُمْ تَعْلَمُوْنَ • اِنَّمَا تَعْبُدُوْنَ مِنْ دُوْنِ اللّٰهِ اَوْثَانًاوَّتَخْلُقُوْنَ اِفْكًا اِنَّ الَّذِيْنَ تَعْبُدُوْنَ مِنْ دُوْنِ اللّٰهِ لاَ يَمْلِكُوْنَ لَكُمْ رِزْقًا فَابْتَغُوْا عِنْدَ اللّٰهِ الرِّزْقَ وَاعْبُدُوْهُ وَاشْكُرُوْالَهٗ اِلَيْهِ تُرْجَعُوْنَ •(سورة العنكبوت، الآيتان ١٦، ١٧)

"ಮತ್ತು ಇಬ್ರಾಹೀಮ್‌ರನ್ನು ರವಾನಿಸಿದೆವು. ಅವರು ತಮ್ಮ ಸಮುದಾಯದೊಂದಿಗೆ ಹೇಳಿದ ಸಂದರ್ಭವನ್ನು (ಸ್ಮರಿಸಿರಿ) "ಅಲ್ಲಾಹನನ್ನು ಆರಾಧಿರಿಸಿರಿ ಮತ್ತು ಅವನನ್ನು ಭಯಪಡಿರಿ. ನೀವು ಅರಿಯುವವರಾಗಿದ್ದರೆ ಅದು ನಿಮಗೆ ಉತ್ತಮವಾಗಿದೆ. ನೀವು ಅಲ್ಲಾಹನನ್ನು ಬಿಟ್ಟು ಯಾವುದನ್ನೆಲ್ಲಾ ಪೂಜಿಸುತ್ತೀರೊ ಅವು ಕೇವಲ ವಿಗ್ರಹಗಳಾಗಿವೆ. ಮತ್ತು ನೀವು ಒಂದು ಸುಳ್ಳನ್ನು ಸೃಷ್ಟಿಸುತ್ತಿರುವಿರಿ. ವಾಸ್ತವದಲ್ಲಿ ಅಲ್ಲಾಹನ ಹೊರತು ನೀವು ಯಾರನ್ನು ಪೂಜಿಸುತ್ತೀರೊ ಅವರು ನಿಮಗೆ ಯಾವುದೇ ಜೀವನಾಧಾರ ನೀಡುವ ಅಧಿಕಾರ ಹೊಂದಿಲ್ಲ. ಅಲ್ಲಾಹನಿಂದ ಜೀವನಾಧಾರ ಯಾಚಿಸಿರಿ. ಅವನನ್ನೇ ಆರಾಧಿಸಿರಿ ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ನೀವು ಅವನ ಕಡೆಗೆ ಮರಳಿಸಲ್ಪಡುವಿರಿ."(29:16, 17)

## ಆರಾಧನೆಯು ಅಲ್ಲಾಹನ ಹಕ್ಕಾಗಿದೆ

ಈ ಹಿಂದೆ ಪ್ರಸ್ತಾಪಿಸಿದ ಸೂಕ್ತಗಳಿಂದ ಇಬ್ರಾಹೀಂ(ಅ)ರವರು ಆರಾಧನೆಯು ಅಲ್ಲಾಹನ ಹಕ್ಕಾಗಿದೆ ಎಂದು ಸ್ಪಷ್ಟಪಡಿಸಿದರು. ಮತ್ತು ಅವನನ್ನೇ ಭಯಪಟ್ಟುಕೊಳ್ಳುವುದು, ಅವನನ್ನೇ ಆರಾಧಿಸುವುದು ಇವುಗಳು ಕೂಡ ಮುಖ್ಯವಾಗಿದೆ. ಮತ್ತು ಅವರ ಸಮುದಾಯವು ಏನೆಲ್ಲಾ ಪ್ರವರ್ತಿಸಿದರೊ ಅವೆಲ್ಲವು ಸಂಪೂರ್ಣ ಸುಳ್ಳಾಗಿದೆ. ಇದಕ್ಕೆ ಯಾವ ಆಧಾರವೂ ಇಲ್ಲ. ಅವರ ಆರಾಧ್ಯರು ಅಣುಗಾತ್ರದಷ್ಟೂ ಅವರ ಅನ್ನದಾತರೂ ಅಲ್ಲ, ಯಾವ ರೀತಿಯಿಂದಲೂ ಇವು ಅವರಿಗೆ ಲಾಭ-ನಷ್ಟವನ್ನುಂಟು ಮಾಡುವುದೂ ಇಲ್ಲ.

**ಆಹಾರವನ್ನು ಒದಗಿಸುವವನು ಅಲ್ಲಾಹನೇ ಆಗಿದ್ದಾನೆ.**

ಅಲ್ಲಾಹನು ಹೇಳುತ್ತಾನೆ,

**فَابْتَغُوا عِنْدَ اللّٰهِ الرِّزْقَ وَاعْبُدُوْهُ (سورة العنكبوت، الآية١٧)**

**"ಅಲ್ಲಾಹನಿಂದ ಜೀವನಾಧಾರ ಯಾಚಿಸಿರಿ ಮತ್ತು ಅವನನ್ನೇ ಆರಾಧಿಸಿರಿ"** ಆ ಪ್ರಕಾರ ಎಲ್ಲರನ್ನು ಬಿಟ್ಟು ಅಲ್ಲಾಹನ ಆರಾಧನೆಯನ್ನು ಮಾಡಬೇಕಾಗಿದೆ ಮತ್ತು ಅವನಿಂದಲೇ ಜೀವನಾಧಾರವನ್ನು ಯಾಚಿಸಬೇಕಾಗಿದೆ.

**وَاشْكُرُوْا لَهُ اِلَيْهِ تُرْجَعُوْنَ (سورة العنكبوت، الآية١٧)**

**"ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ನೀವು ಅವನ ಕಡೆಗೇ ಮರಳಿಸಲ್ಪಡುವಿರಿ."** ಇದರಿಂದ ಎಲ್ಲರಿಗೂ ಅಲ್ಲಾಹನ ಕಡೆ ಮರಳಲಿಕ್ಕಿದೆ ಎನ್ನುವುದು ತಿಳಿದು ಬರುತ್ತದೆ. ಅವನು ಎಲ್ಲಾ ವಸ್ತುಗಳ ಮೇಲೆ ಸಾಮರ್ಥ್ಯವುಳ್ಳವನಾಗಿದ್ದು ಅವನು ತನ್ನ ಸಂಪೂರ್ಣ ಕೊಡುಗೆ ಮತ್ತು ಉಪಕಾರದಿಂದ ಸರ್ವ ಕೃತಜ್ಞತೆ ಮತ್ತು ಪ್ರಾರ್ಥನೆಗಳಿಗೆ ಹಕ್ಕುದಾರನಾಗಿದ್ದಾನೆ.

**اِنَّ اللّٰهَ هُوَ الرَّزَّاقُ ذُو الْقُوَّةِ الْمَتِيْنُ (سورة الذاريٰت، الآية٥٨)**

**"ನಿಶ್ಚಯವಾಗಿಯೂ ಅಲ್ಲಾಹನು ಸ್ವಯಂ ಮಹಾ ಅನ್ನದಾತನು, ಮಹಾಶಕ್ತಿಶಾಲಿ ಮತ್ತು ಪ್ರಚಂಡನಾಗಿದ್ದಾನೆ".**

ಅಲ್ಲಾಹನ ಆದೇಶವಾಗಿದೆ,

**وَمَا مِنْ دَآبَّةٍ فِي الْاَرْضِ اِلَّا عَلَى اللّٰهِ رِزْقُهَا وَيَعْلَمُ مُسْتَقَرَّهَا**
**وَمُسْتَوْدَعَهَا كُلٌّ فِيْ كِتَابٍ مُّبِيْنٍ• (سورة هود، الآية٦)**

"ಭೂಮಿಯಲ್ಲಿ ಚಲಿಸುವ ಯಾವ ಸಜೀವಿಯ ಜೀವನಾಧಾರವೂ ಅಲ್ಲಾಹನ

**ಹೊಣೆಯಲ್ಲಿಲ್ಲದೆ ಇಲ್ಲ. ಅದು ಎಲ್ಲಿ ವಾಸಿಸುತ್ತದೆ ಮತ್ತು ಎಲ್ಲಿ ಒಪ್ಪಿಸಲ್ಪಡುತ್ತದೆ ಎಂಬುದು ಅವನಿಗೆ ತಿಳಿಯದೆ ಇಲ್ಲ. ಎಲ್ಲವೂ ಒಂದು ಸುಸ್ಪಷ್ಟ ಗ್ರಂಥದಲ್ಲಿ ಲಿಖಿತಗೊಂಡಿದೆ".**

**ಅಲ್ಲಾಹನು ಸಂದೇಶವಾಹಕರಿಗೆ ಜನರ ಮುಂದೆ ತನ್ನ ನಾಮಗಳನ್ನು ಗುಣವಿಶೇಷಗಳನ್ನು ಹಾಗೂ ತನ್ನ ಪ್ರವರ್ತನೆಗಳನ್ನು ವಿವರಿಸಲು ಆಜ್ಞೆ ನೀಡಿದ್ದನು. ಏಕೆಂದರೆ ಅವರು ಈ ಮುಖಾಂತರ ಅವನನ್ನು ಗುರುತಿಸಲ್ಪಡಲಿಕ್ಕಾಗಿ:**

ಈ ರೀತಿಯ ಸೂಕ್ತಗಳು ಅಲ್ಲಾಹನ ಗ್ರಂಥದಲ್ಲಿ ಬಹಳಷ್ಟು ಕಾಣಬಹುದಾಗಿದೆ. ದಾಸರು ತಮ್ಮ ಸೃಷ್ಟಿಕರ್ತ, ಅನ್ನದಾತ ಮತ್ತು ಆರಾಧ್ಯನನ್ನು ಗುರುತಿಸಿ ಅವನ ಕಡೆ ಗಮನ ಕೊಡುವಂತೆ ಮಾಡಲು ಅಲ್ಲಾಹನು ತನ್ನ ಸಂದೇಶವಾಹಕರಿಗೆ ಆಜ್ಞೆ ನೀಡಿದ್ದಾನೆ. ಯಾರು ಕುರ್‌ಆನನ್ನು ಸರಿಯಾದ ರೀತಿಯಲ್ಲಿ ಅವಲೋಕಿಸುತ್ತಾನೋ ಅವನಿಗೆ ಈ ವಿಷಯಗಳು ಸ್ಪಷ್ಟ ರೂಪದಲ್ಲಿ ಕಂಡುಬರುತ್ತದೆ.

ಏಕೆಂದರೆ ಸರ್ವ ಮಾನವರಿಗಿಂತಲೂ ಅತ್ಯಂತ ಅಧಿಕ ಮಧುರ ವಿವರಣೆ ಮತ್ತು ಅಲ್ಲಾಹನ ವಿಷಯದಲ್ಲಿ ಎಲ್ಲರಿಗಿಂತಲೂ ಅತೀ ಹೆಚ್ಚು ತಿಳುವಳಿಕೆಯುಳ್ಳವರು ಹಾಗೂ ಅವನ ಕಡೆಗೆ ಆಹ್ವಾನಿಸುವುದರಲ್ಲಿ ಎಲ್ಲರಿಗಿಂತಲೂ ಅತೀ ಹೆಚ್ಚು ಸಂಪೂರ್ಣ ಸಂತೋಷವನ್ನು ಹೊಂದುವವರು ಪ್ರವಾದಿಗಳಾಗಿರುತ್ತಾರೆ. ಇವರನ್ನು ಮೀರಿ ದಾವಾ ಕಾರ್ಯಗಳಲ್ಲಿ ಕ್ಷಮೆ ಕೈಗೊಳ್ಳುವವರು. ಅಲ್ಲಾಹನ ಕುರಿತು ಅತ್ಯಂತ ಹೆಚ್ಚು ತಿಳುವಳಿಕೆಯುಳ್ಳವರು ಹಾಗೂ ಜನಾಂಗದ ಮಾರ್ಗದರ್ಶನ ನೀಡುವ ಪ್ರವರ್ತನೆಯಲ್ಲಿ ಹೆಚ್ಚು ಆಸಕ್ತಿ ಮತ್ತು ಅಪೇಕ್ಷೆ ಹೊಂದುವವರು ಇಲ್ಲಿ ಯಾರೂ ಇಲ್ಲ.

ಈ ಪ್ರಕಾರ ಅವರು ಅಲ್ಲಾಹನ ಸಂದೇಶಗಳನ್ನು ಸಂಪೂರ್ಣವಾಗಿಯೇ ಜನರಿಗೆ ತಲುಪಿಸಿದ್ದಾರೆ. ನೈಜ ಸೃಷ್ಟಿಕರ್ತ ಮತ್ತು ಆರಾಧ್ಯನ ನಾಮಗಳನ್ನು, ಗುಣ ವಿಶೇಷಗಳನ್ನು ಮತ್ತು ಅವನ ಪ್ರವೃತ್ತಿಗಳನ್ನು ಜನರ ಮುಂದೆ ವಿವರಿಸಿದ್ದಾರೆ. ದಾಸರು ತಮ್ಮ ಪ್ರಭುವನ್ನು ಅರಿಯುವ ಅವನಿಗೆ ಅವನ ನಾಮ ವಿಶೇಷತೆ ಮತ್ತು ಅವನ ಗುಣ ವಿಶೇಷತೆಗಳ ಮುಖಾಂತರ ಅವನನ್ನು ಗುರುತಿಸುವ, ಅವನ ಹಕ್ಕುಗಳು ಹಾಗೂ ಅವನಿಗೆ ದಾಸರ ಮೇಲಿರುವ ಹಕ್ಕುಗಳ ಬಗ್ಗೆ ಅರಿಯುವ ಮತ್ತು ಅವನ ಕಡೆಗೆ ಅಂತರ್ದೃಷ್ಟಿ ಮತ್ತು ಜ್ಞಾನದ ಬೆಳಕಿನಲ್ಲಿ ಗಮನಿಸುವ ಸಲುವಾಗಿ ಇದರ ಕುರಿತು ಅವರು ಸೃಷ್ಟ ರೀತಿಯಲ್ಲಿ ತಿಳಿ ಹೇಳಿದ್ದಾರೆ.

ಮೂಸಾ (ಅ)ರವರು ಕೂಡಾ ಅಲ್ಲಾಹನ ಗುಣವಿಶೇಷತೆಗಳನ್ನು ವಿವರಿಸುತ್ತಾ ಫಿರ್‌ಔನ್‌ನನ್ನು ಸತ್ಯದ ಕಡೆಗೆ ತಿರುಗಿಸಲು ಪ್ರಯತ್ನಿಸಿದರು.

ಅಲ್ಲಾಹನು ಹೇಳುತ್ತಾನೆ,

**وَاِذْنَادٰى رَبُّكَ مُوْسٰىٓ اَنِ ائْتِ الْقَوْمَ الظّٰلِمِيْنَ • قَوْمَ فِرْعَوْنَ اَلَا يَتَّقُوْنَ • قَالَ رَبِّ اِنِّىٓ اَخَافُ اَنْ يُّكَذِّبُوْنِ • وَيَضِيْقُ صَدْرِىْ**

وَلَا يَنْطَلِقُ لِسَانِىْ فَارْسِلْ اِلىٰ هَارُوْنَ • وَلَهُمْ عَلَيَّ ذَ نْبٌ فَاَخَافُ
اَنْ يَّقْتُلُوْنِ •قَالَ كَلَّا فَاذْهَبَا بِآيَاتِنَا اِ نَّا مَعَكُمْ مُّسْتَمِعُوْنَ•
فَاْتِيَافِرْعَوْنَ فَقُوْلَا اِنَّا رَسُوْلُ رَبِّ الْعٰلَمِيْنَ• (سورة الشعراء، الآيات ١٠ـ ١٦)

"ನಿಮ್ಮ ಪ್ರಭು ಮೂಸಾರನ್ನು ಕರೆದು "ಅಕ್ರಮಿ ಜನಾಂಗದ ಕಡೆಗೆ ಹೋಗು ಫಿರ್‌ಔನನ ಜನಾಂಗದ ಕಡೆಗೆ; ಅವರು ಭಯಪಡುವುದಿಲ್ಲವೇ?" ಎಂದು ಹೇಳಿದ ವೃತ್ತಾಂತವವನ್ನು ಇವರಿಗೆ ತಿಳಿಸಿರಿ. ಆಗ ಅವರು "ನನ್ನ ಪ್ರಭೂ, ಅವರು ನನ್ನನ್ನು ಸುಳ್ಳಾಗಿಸಿ ಬಿಡುವರೆಂಬ ಭಯ ನನಗಿದೆ. ನನ್ನ ಹೃದಯ ಮುದುಡುತ್ತಿದೆ. ನನ್ನ ನಾಲಿಗೆ ಚಲಿಸುವುದಿಲ್ಲ. ನೀನು ಹಾರೂನರ ಬಳಿಗೆ ಸಂದೇಶ ವಾಹಕತ್ವವನ್ನು ಕಳುಹಿಸು. ಅವರ ಬಳಿ ನನ್ನ ಮೇಲೆ ಒಂದು ಅಪರಾಧದ ಆರೋಪವೂ ಇದೆ. ಆದುದರಿಂದ ಅವರು ನನ್ನನ್ನು ವಧಿಸಿ ಬಿಡುವರೆಂದು ನಾನು ಹೆದರುತ್ತೇನೆ ಎಂದು ಭಿನ್ನವಿಸಿದರು. ಆಗ ಅಲ್ಲಾಹನು "ಖಂಡಿತಾ ಇಲ್ಲ. ನೀವಿಬ್ಬರೂ ನಮ್ಮ ನಿದರ್ಶನಗಳನ್ನು ತೆಗೆದುಕೊಂಡು ಹೋಗಿರಿ. ನಾವು ನಿಮ್ಮೊಂದಿಗಿದ್ದು ಎಲ್ಲವನ್ನೂ ಆಲಿಸುತ್ತಿರುವೆವು. ಫಿರ್‌ಔನನ ಬಳಿಗೆ ಹೋಗಿರಿ ಮತ್ತು ನೀನು ಬನೀ ಇಸ್ರಾಈಲರನ್ನು ನಮ್ಮ ಜೊತೆ ಕಳುಹಿಸಬೇಕೆಂದು ಸರ್ವಲೋಕಗಳ ಪ್ರಭು ನಮ್ಮನ್ನು ರವಾನಿಸಿದ್ದಾನೆ ಎಂದು ಅವರೊಡನೆ ಹೇಳಿರಿ ಎಂದನು."

ಸರ್ವಲೋಕಗಳ ಪ್ರಭುವಿನ ಸಂದೇಶವಾಹಕರಾಗಿ ಅವನ ಬಳಿ ಬಂದಿರುವುದಾಗಿ ಫಿರ್‌ಔನನಿಗೆ ತಿಳಿಸಲು ಅಲ್ಲಾಹನು ಮೂಸಾ(ಅ) ರವರಿಗೆ ಆಜ್ಞೆ ನೀಡಿದನು. ಇದರಿಂದಾಗಿ ಉಪದೇಶವನ್ನು ಸ್ವೀಕರಿಸಿ ಸತ್ಯದ ಕಡೆಗೆ ಗಮನವನ್ನು ಕೇಂದ್ರೀಕರಿಸಲಿ ಎನ್ನುವ ಉದ್ದೇಶವಾಗಿತ್ತು ಆದರೆ ಅವನು ಉಪದೇಶವನ್ನು ಸ್ವೀಕರಿಸಲಿಲ್ಲ.

ಈಗ ಹೇಳಲಾದ ಮಾತುಗಳನ್ನು ಫಿರ್‌ಔನನು ತಿರಸ್ಕರಿಸಿದನು ಮತ್ತು ಹೇಳಲಾರಂಭಿಸಿದನು.

اَلَمْ نُرَبِّكَ فِيْنَا وَلِيْدًاوَّلَبِثْتَ فِيْنَا مِنْ عُمُرِكَ سِنِيْنَ •وَفَعَلْتَ
فَعْلَتَكَ الَّتِىْ فَعَلْتَ وَاَنْتَ مِنَ الْكَافِرِيْنَ • قَالَ فَعَلْتُهَآ اِذًاوَّاَنَا مِنَ
الضَّآلِّيْنَ• فَفَرَرْتُ مِنْكُمْ لَمَّا خِفْتُكُمْ فَوَهَبَ لِىْ رَبِّىْ حُكْماً
وَجَعَلَنِىْ مِنَ الْمُرْسَلِيْنَ • وَتِلْكَ نِعْمَةٌ تَمُنُّهَا عَلَيَّ اَنْ عَبَّدْتَّ بَنِىْ
اِسْرَآ ئِيْلَ • قَالَ فِرْعَوْنُ وَمَارَبُّ الْعٰلَمِيْنَ• قَالَ رَبُّ السَّمٰوٰتِ
وَالْاَرْضِ وَمَابَيْنَهُمَا اِنْ كُنْتُمْ مُّوْقِنِيْنَ • قَالَ لِمَنْ حَوْلَهُ اَلاَ
تَسْتَمِعُوْنَ • قَالَ رَبُّكُمْ وَرَبُّ اٰبَآئِكُمُ الْاَوَّلِيْنَ•قَالَ اِنَّ رَسُوْلَكُمُ
الَّذِىْ اُرْسِلَ اِلَيْكُمْ لَمَجْنُوْنٌ• قَالَ رَبُّ الْمَشْرِقِ وَالْمَغْرِبِ
وَمَابَيْنَهُمَا اِنْ كُنْتُمْ تَعْقِلُوْنَ• (سورة الشعراء،الآيات١٨ـ٢٨)

**ಫಿರ್‌ಔನನು "ನಾನು ನಿಮ್ಮನ್ನು ನಮ್ಮಲ್ಲಿ ಮಗುವಿನಂತೆ ಸಾಕಿರಲಿಲ್ಲವೇ? ನೀನು ನಿನ್ನ ಜೀವಮಾನದ ಅನೇಕ ವರ್ಷಗಳನ್ನು ನಮ್ಮಲ್ಲಿ ಕಳೆದಿರುವೆ. ಅನಂತರ ನೀನು ಏನು ಮಾಡಿದೆಯೋ ಅದನ್ನು ಮಾಡಿದೆ. ನೀನು ಮಹಾ ಕೃತಘ್ನನಾಗಿರುವೆ" ಎಂದನು. ಆಗ ಮೂಸಾ "ನಾನು ಆಗ ಆ ಕೃತ್ಯವನ್ನು ಗೊತ್ತಿಲ್ಲದೆ ಮಾಡಿಬಿಟ್ಟಿದ್ದೆ. ಅನಂತರ ನಾನು ನಿಮಗೆ ಹೆದರಿ ಓಡಿ ಹೋದೆ. ಆ ಬಳಿಕ ನನ್ನ ಪ್ರಭು ನನಗೆ ನಿರ್ದೇಶನವನ್ನು ದಯಪಾಲಿಸಿದನು ಮತ್ತು ನನ್ನನ್ನು ಸಂದೇಶವಾಹಕರಲ್ಲಿ ಸೇರಿಸಿಕೊಂಡನು. ಇನ್ನು ನೀನು ನನ್ನ ಮೇಲೆ ಉಪಕಾರ ಭಾರವನ್ನಿರಿಸುತ್ತಿರುವ ವಿಷಯ. ಅದರ ವಾಸ್ತವಿಕತೆಯೇನೆಂದರೆ ನೀನು ಬನೀಇಸ್ರಾಈಲರನ್ನು ಗುಲಾಮರನ್ನಾಗಿ ಮಾಡಿಕೊಂಡಿದ್ದೆ" ಎಂದು ಉತ್ತರಿಸಿದರು. ಆಗ ಫಿರ್‌ಔನನು "ಈ ಸರ್ವಲೋಕಗಳ ಪ್ರಭು ಎಂದರೇನು?" ಎಂದು ಕೇಳಿದನು. (ಆಗ ) ಮೂಸಾ "ಭೂಮಿ ಆಕಾಶಗಳ ಪ್ರಭು ಮತ್ತು ಭೂಮಿ ಆಕಾಶಗಳ ನಡುವೆ ಇರುವ ಸಕಲ ವಸ್ತುಗಳ ಪ್ರಭು ನೀವು ದೃಢ ವಿಶ್ವಾಸವಿರಿಸುವವರಾಗಿದ್ದರೆ" ಎಂದು ಹೇಳಿದರು. ಫಿರ್‌ಔನನು ತನ್ನ ಸುತ್ತಮುತ್ತಲಿದ್ದ ಜನರೊಡನೆ 'ಕೇಳಿದಿರಾ?'ಎಂದನು. (ಆಗ) ಮೂಸಾ- ನಿಮ್ಮ ಪ್ರಭುವೂ ಗತಿಸಿ ಹೋಗಿರುವ ನಿಮ್ಮ ಪೂರ್ವಿಕರ ಪ್ರಭುವೂ ಎಂದರು. ಫಿರ್‌ಔನನು (ನೆರೆದಿದ್ದ ಜನರೊಡನೆ) "ನಿಮ್ಮ ಕಡೆಗೆ ರವಾನಿಸಲ್ಪಟ್ಟಿರುವ ಈ ರಸೂಲರು ಸಂಪೂರ್ಣ ಹುಚ್ಚನಾಗಿರುವಂತೆ ತೋರುತ್ತದೆ ಎಂದನು." (ಆಗ) ಮೂಸಾ "ಪೂರ್ವ ಪಶ್ಚಿಮ ಮತ್ತು ಅವೆರಡರ ನಡುವೆ ಇರುವ ಎಲ್ಲವುಗಳ ಪ್ರಭು-ನೀವು ಒಂದಿಷ್ಟು ಬುದ್ಧಿಯುಳ್ಳವರಾಗಿದ್ದರೆ"ಎಂದರು.**

"ನೀವು ಒಂದಿಷ್ಟು ಆಲೋಚಿಸಿರಿ! ಯಾವ ರೀತಿ ಫಿರ್‌ಔನನ ಮುಂದೆ ಮೂಸಾ(ಅ)ರವರು ಅಲ್ಲಾಹನ ಗುಣ ವಿಶೇಷತೆಗಳನ್ನು ವಿವರಿಸುತ್ತಿರುವರು. ಅವನೇ ಸರ್ವಲೋಕಗಳ, ಸರ್ವ ಗಗನಗಳ ಇಡೀ ಪ್ರಪಂಚದ ಹಾಗೂ ಅವೆರಡರ ಮಧ್ಯೆಯಲ್ಲಿರುವ ಸರ್ವ ವಸ್ತುಗಳ ಪ್ರಭುವೆಂದು ಮತ್ತು ಅವನೇ ಪೂರ್ವ ಪಶ್ಚಿಮಗಳ ಪ್ರಭು ಕೂಡಾ ಆಗಿದ್ದಾನೆಂದು ಮೂಸಾ(ಅ) ರವರು ಅವನಿಗೆ ಸ್ಪಷ್ಟಪಡಿಸಿದರು. ಏಕೆಂದರೆ ಅಲ್ಲಾಹನ ಶತ್ರುಗಳು ಈ ಗುಣ ವಿಶೇಷತೆಗಳನ್ನು ಅರಿತು ಸತ್ಯದ ಕಡೆಗೆ ಹಿಂದಿರುಗಲಿ ಎಂಬ ಉದ್ದೇಶವಾಗಿತ್ತು. ಆದರೆ ಅವನು ತನ್ನ ಅವಿಧೇಯತೆ ಮತ್ತು ಪಥಭ್ರಷ್ಟತೆಯಲ್ಲಿ ಚಿರಕಾಲ ಮುಳುಗುವನೆಂದು ಹಾಗೂ ಅವನು ಅಲ್ಲಾಹನನ್ನು ತಿರಸ್ಕರಿಸಿ ಅವನೊಂದಿಗೆ ಶತ್ರುತ್ವದಲ್ಲಿ ಮರಣ ಹೊಂದುವನೆಂಬ ವಿಷಯವು ಅಲ್ಲಾಹನ ಬಳಿಯಲ್ಲಿ ಮೊದಲೇ ಲಿಖಿತಗೊಂಡಿತ್ತು. ಅಲ್ಲಾಹನು ನಮ್ಮನ್ನು ಈ ರೀತಿಯ ಮರಣದಿಂದ ರಕ್ಷಿಸಲು ಎಂದು ನಾವು ಪ್ರಾರ್ಥಿಸುತ್ತೇವೆ. ಆಮೀನ್

ಅಲ್ಲಾಹನು ಮೂಸಾ(ಅ) ಮತ್ತು ಹಾರೂನ್(ಅ)ರವರ ಜೊತೆಗಿರುವನು, ಅವರ ಮಾತುಗಳು ಆಲಿಸುತ್ತಿರುವನು. ಹಾಗೂ ಅವರನ್ನು ನೋಡುತ್ತಿರುವನು, ಅವರಿಗೆ ಮೇಲ್ವಿಚಾರಣೆಯನ್ನು ನೀಡಿದ್ದನು. ಮತ್ತು ಅವನು ಅವರ ಸಂರಕ್ಷಕನೆಂದು, ಸಹಾಯಿಯೆಂದು ಮತ್ತು ಅವರ ಪಕ್ಷಪಾತಿಯೆಂದು ಕೂಡಾ ಅವರಿಬ್ಬರಿಗೆ ತಿಳಿಸಿದ್ದನು. ಈ ವಿಷಯಗಳ ಪರಿಣಾಮದಿಂದ ಅವರಿಬ್ಬರೂ ಈ ಪ್ರಬಲ ವಿದ್ರೋಹಿಯೂ, ಅಹಂಕಾರಿಯೂ, (سورة النازعات، الآية ٢٤) اَنَا رَبُّكُمُ الْاَعْلٰی "ನಾನು ನಿಮ್ಮ ಮಹಾಪ್ರಭುವೆಂದು" ಸಾರಿದ್ದ ಅವನನ್ನು ಇಸ್ಲಾಮಿನೆಡೆಗೆ ಅಹ್ವಾನಿಸಲು ಅವರಿಬ್ಬರು ಮುಂದಾದರು ಅದರಂತೆಯೇ ಅಲ್ಲಾಹನು ಅವರಿಬ್ಬರನ್ನು ಸಂರಕ್ಷಿಸಿದನು ಮತ್ತು ಅವನ ದುಷ್ಟ ಪ್ರವೃತ್ತಿ ಮತ್ತು ಕುತಂತ್ರಗಳಿಂದ ರಕ್ಷಣೆ ನೀಡಿದನು.

## ಅಲ್ಲಾಹನು ತನ್ನ ಪ್ರವಾದಿಗಳು ಮತ್ತು ಸಂದೇಶವಾಹಕರಿಗೆ ರಕ್ಷಣೆ ನೀಡುತ್ತಾನೆ

ನಿಸ್ಸಂದೇಹವಾಗಿಯೂ ಅಲ್ಲಾಹನು ಅವನ ಪ್ರವಾದಿಗಳು ಮತ್ತು ಸಂದೇಶವಾಹಕರನ್ನು ಸಂರಕ್ಷಿಸುತ್ತಾನೆ ಮತ್ತು ಅವರ ಮೇಲೆ ತನ್ನ ವಿಶೇಷವಾದ ಕೃಪೆ ಮತ್ತು ಅನುಗ್ರಹವನ್ನು ತೋರುತ್ತಾನೆ. ಒಬ್ಬ ವ್ಯಕ್ತಿ ಸ್ವಯಂ ಅಹಂಬಾವಿಯೂ, ಅವಿಧೇಯನೂ, ಆಜ್ಞೋಲ್ಲಂಘಕನೂ, ಶಪಿಸಲ್ಪಟ್ಟವನೂ ಅರಸನೂ ಆಗಿದ್ದು ತಾನು ರಬ್ಬುಲ್ ಆಲಮೀನ್ (ಸಕಲ ಲೋಕಗಳ ಪರಿಪಾಲಕನು) ಎಂದು ವಾದಿಸುತ್ತಾನೆ. ಆದಾಗ್ಯೂ ಎರಡು ಪ್ರವಾದಿಗಳು ಅವನಿಗೆ ಸತ್ಯಸಂದೇಶವನ್ನು ತಲುಪಿಸಲು, ಅಲ್ಲಾಹನ ಕುರಿತು ಅವನಿಗಿರುವ ಬಾಧ್ಯತೆಯನ್ನು ನೆನಪಿಸಲು ಅವನನ್ನು ಸಮೀಪಿಸುತ್ತಾರೆ. ಆಗಲಾದರೂ ಅವನು ಅಲ್ಲಾಹನೆಡೆಗೆ ಮುಖತಿರುಗಿಸಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಅವನು ನಿರಾಕರಿಸಿಬಿಟ್ಟನು ಮತ್ತು ಜಂಬ ತೋರಿದನು. ಬಳಿಕ ಅವನು ತನ್ನ ಜಾದೂಗಾರರನ್ನೂ, ಪುಂಡ-ಪೋಕರಿಗಳನ್ನೂ ಎದುರಿಸುವಂತೆ ಸವಾಲು ಹಾಕಿದನು. ಕಟ್ಟ ಕಡೆಗೆ ಅಲ್ಲಾಹನು ಅವನ ಕುತಂತ್ರಗಳನ್ನು ಮುಗಿಸಿಬಿಟ್ಟನು ಮತ್ತು ಅವನ ಅಸಮರ್ಥತೆಯನ್ನೂ-ಅಸಹಾಯಕತನವನ್ನೂ ಬಹಿರಂಗಗೊಳಿಸಿದನು. ಅವನು ಮತ್ತು ಜಾದೂಗಾರರ ವಿರುದ್ಧ ಮೂಸಾ ಮತ್ತು ಹಾರೂನ್(ಅ)ರವರಿಗೆ ಅಲ್ಲಾಹನು ಸಹಾಯ ಮಾಡಿದನು.

ಅವನು ನಿರಂತರ ತನ್ನ ಅಹಂಕಾರ ಧೋರಣೆಗೆ ಅಂಟಿಕೊಂಡಾಗ ಅಲ್ಲಾಹನು ಅವನು ಮತ್ತು ಅವನ ಸಂಪೂರ್ಣ ಸೇನೆಯನ್ನು ಸಮುದ್ರದಲ್ಲಿ ಮುಳುಗಿಸಿಬಿಟ್ಟನು. ಮೂಸಾ ಮತ್ತು ಹಾರೂನ್(ಅ) ಮತ್ತು ಅವರೊಂದಿಗಿದ್ದ ಬನೀ ಇಸ್ರಾಯೀಲರನ್ನು ರಕ್ಷಿಸಿದನು.

ಈ ಎಲ್ಲಾ ಸಂಗತಿಗಳೂ ಅಲ್ಲಾಹನ ಸುಸ್ಪಷ್ಟ ಪುರಾವೆಗಳಾಗಿವೆ. ಅವನು ತನ್ನ ಶತ್ರುಗಳೊಂದಿಗೆ ಮುಯ್ಯಿ ತೀರಿಸಲು ಮತ್ತು ತನ್ನ ಸ್ನೇಹಿತರಿಗೆ ಸಹಾಯ ಮಾಡಲು ಸಶಕ್ತನಿದ್ದಾನೆನ್ನುವುದಕ್ಕೆ ಇದೆಲ್ಲವೂ ಸಾಕ್ಷಿಗಳಾಗಿವೆ. ಎರಡು ಜನ, ಅವರೊಂದಿಗೆ ಯಾವುದೇ ಸಮೂಹವಿಲ್ಲ, ಫಿರ್‌ಔನನು ಗುಲಾಮರಾಗಿರಿಸಿದ್ದ ಕೆಲವು ದುರ್ಬಲರ ಹೊರತು, ಅವರ ಗಂಡು ಮಕ್ಕಳ ತಲೆ ಕಡಿಯಲಾಗುತ್ತಿತ್ತು, ಅವರ ಹೆಣ್ಮಕ್ಕಳನ್ನು ಜೀವಂತ ಬಿಡಲಾಗುತ್ತಿತ್ತು. ಇವರನ್ನು ನಿರಂತರ ಚಿತ್ರಹಿಂಸೆ ನೀಡಿ ಪೀಡಿಸಲಾಗುತ್ತಿತ್ತು. ಇಂತಹಾ ಎರಡು ಜನ ಓರ್ವ ಅಕ್ರಮಿಯೂ ಕ್ರೂರನೂ ಆದ ಅರಸನಿಗೆ ಸದ್ಧರ್ಮದ ಸಂದೇಶ ಕೊಡಲು, ಅವನಿಗೆ ಸತ್ಯದ ದಾರಿಯನ್ನು ತೋರಿಸಿಕೊಡಲು ಮತ್ತು ಅವನು ಎಂತಹಾ ಮಿಥ್ಯ ವಿಶ್ವಾಸವಿಟ್ಟುಕೊಂಡು ಜೀವಿಸುತ್ತಿರುವನೊ ಅದು ತಿರಸ್ಕರಿಸಲ್ಪಡಬೇಕಾಗಿದ್ದೆಂದು ಸ್ಪಷ್ಟವಾಗಿ ಹೇಳಿ ಕೊಡಲು ಮುನ್ನಡೆಯುತ್ತಾರೆ. ಆಗ ಅಲ್ಲಾಹನು ಆ ಅಕ್ರಮಿಯ ಅಕ್ರಮ ಮತ್ತು ದೌರ್ಜನ್ಯಗಳಿಂದ ಕೇವಲ ಅವರಿಗೆ ರಕ್ಷಣೆ ನೀಡುವುದಷ್ಟೇ ಅಲ್ಲ ಬದಲಾಗಿ ಈ ಇಬ್ಬರು ಯೋಧರಲ್ಲೂ ಧೈರ್ಯವನ್ನೂ ಸ್ಥೈರ್ಯವನ್ನೂ ತುಂಬಿ ಇವರನ್ನು ಹುರಿದುಂಬಿಸುತ್ತಾನೆ ಮತ್ತು ಇವರ ಬಾಯಿಯಿಂದ ಎಂಥಹಾ ಮಾತುಗಳನ್ನು ಹೊರಡಿಸುತ್ತಾನೆಂದರೆ ಅದು ಅಂತಿಮವಾಗಿ ಆ ಅಕ್ರಮಿಯ ಮಟ್ಟಿಗೆ, ಆಧಾರ ಪ್ರಮಾಣಗಳೆನಿಸುತ್ತದೆ.

ಅಲ್ಲಾಹನು ಈ ಕುರಿತು ಪ್ರಸ್ತಾಪಿಸುತ್ತಾ ಹೇಳುತ್ತಾನೆ,

فَمَنْ رَّبُّكُمَا يٰمُوْسٰى • قَالَ رَبُّنَا الَّذِىْٓ اَعْطٰى كُلَّ شَىْءٍ خَلْقَهٗ ثُمَّ هَدٰى • قَالَ فَمَا بَالُ الْقُرُوْنِ الْاُوْلٰى • قَالَ عِلْمُهَا عِنْدَ رَبِّىْ فِىْ كِتٰبٍ • لَا يَضِلُّ رَبِّىْ وَلَا يَنْسٰى • اَلَّذِىْ جَعَلَ لَكُمُ الْاَرْضَ مَهْدًا وَّسَلَكَ لَكُمْ فِيْهَا سُبُلًا وَّاَنْزَلَ مِنَ السَّمَآءِ مَآءً فَاَخْرَجْنَا بِهٖٓ اَزْوَاجًا مِّنْ نَّبَاتٍ شَتّٰى • كُلُوْا وَارْعَوْا اَنْعَامَكُمْ اِنَّ فِىْ ذٰلِكَ لَاٰيٰتٍ لِّاُولِى النُّهٰى • مِنْهَا خَلَقْنٰكُمْ وَفِيْهَا نُعِيْدُكُمْ وَمِنْهَا نُخْرِجُكُمْ تَارَةً اُخْرٰى • (سورة طه، الآيات ٤٩ ـ ٥٥)

"ಆಗ ಫಿರ್‌ಔನ್ ಹೀಗೆ ಹೇಳಿದನು, "ಸರಿ, ಹಾಗಾದರೆ ನಿಮ್ಮಿಬ್ಬರ ಪಾಲಕ ಪ್ರಭು ಯಾರು?" ಮೂಸಾ ಉತ್ತರವಿತ್ತರು, "ಪ್ರತಿಯೊಂದು ವಸ್ತುವಿಗೆ ಅದರ ಆಕೃತಿ ಪ್ರಧಾನ ಮಾಡಿ ಆ ಬಳಿಕ ಅದಕ್ಕೆ ದಾರಿ ತೋರಿದವನೇ ನಮ್ಮ ಪ್ರಭು" ಫಿರ್‌ಔನ್ ಹೇಳಿದನು, "ಹಾಗಾದರೆ ಗತ ಪೀಳಿಗೆಗಳ ಗತಿ ಏನಾಗಿತ್ತು?" ಮೂಸಾ ಹೇಳಿದರು, "ಅದರ ಜ್ಞಾನವು ನನ್ನ ಪ್ರಭುವಿನ ಬಳಿ ಇರುವ ಒಂದು ಗ್ರಂಥದಲ್ಲಿ ಸುರಕ್ಷಿತವಾಗಿದೆ. ನನ್ನ ಪ್ರಭು ತಪ್ಪುವುದೂ ಮರೆಯುವುದೂ ಇಲ್ಲ, ನಿಮಗಾಗಿ ಭೂಮಿಯನ್ನು ಹಾಸಿದವನೂ ಅದರಲ್ಲಿ ನಿಮಗೆ ಸಂಚರಿಸಲು ದಾರಿಗಳನ್ನು ಮಾಡಿದವನೂ - ಆಕಾಶದಿಂದ ನೀರನ್ನು ಸುರಿಸಿದವನೂ ಅನಂತರ ಅದರ ಮೂಲಕ ತರತರದ ಉತ್ಪನ್ನಗಳನ್ನು ಹೊರತಂದವನೂ ಅವನೇ ನೀವು ತಿನ್ನಿರಿ ಮತ್ತು ನಿಮ್ಮ ಜಾನುವಾರುಗಳನ್ನು ಮೇಯಿಸಿರಿ. ನಿಶ್ಚಯವಾಗಿಯೂ ಬುದ್ಧಿವಂತರಿಗೆ ಅದರಲ್ಲಿ ಅನೇಕ ನಿದರ್ಶನಗಳಿವೆ. ಇದೇ ಮಣ್ಣಿನಿಂದ ನಾವು ನಿಮ್ಮನ್ನು ಸೃಷ್ಠಿಸಿರುತ್ತೇವೆ. ಇದರೊಳಕ್ಕೆ ನಿಮ್ಮನ್ನು ಮರಳಿ ಒಯ್ಯುವೆವು ಮತ್ತು ಇದರಿಂದಲೇ ನಾವು ನಿಮ್ಮನ್ನು ಪುನಃ ಹೊರತರುವೆವು''. (20/49-55)

**ಎಲ್ಲಾ ಪ್ರವಾದಿಗಳೂ ಸತ್ಯವನ್ನೂ ಬಹಿರಂಗ ಪಡಿಸಿದ್ದಾರೆ :**

ಇಲ್ಲಿ ಸ್ಪಷ್ಟಪಡಿಸಲಿರುವುದೇನೆಂದರೆ, ಈ ಭೂಮಿಯಲ್ಲಿ ನಿಯೋಜಿಸಲಾದ ಎಲ್ಲಾ ಪ್ರವಾದಿಗಳೂ ಸತ್ಯವನ್ನು ಬಹಿರಂಗಪಡಿಸಿದ್ದಾರೆ ಮತ್ತು ಅದನ್ನು ಜನರಿಗೆ ವಿಶದವಾಗಿ ತಿಳಿಸಿಕೊಟ್ಟಿರುತ್ತಾರೆ. ಅವರು ಸೃಷ್ಟಿಕರ್ತನ ಹೆಸರುಗಳನ್ನು ಅವನ ಗುಣಗಳನ್ನೂ ತಿಳಿಸುತ್ತಾ ಅವನನ್ನು ಆರಾಧನೆಗಳಿಗೆ ಅರ್ಹನಾಗಿಸುವ ವಿಶೇಷಣಗಳನ್ನು ವಿವರಿಸಿಕೊಟ್ಟಿದ್ದಾರೆ. ಅವನೇ ಸಕಲ ಚರಾಚರಗಳ ಸೃಷ್ಟಿಕರ್ತನೆಂದೂ, ಪರಿಮಾಣುವಿನಿಂದ ಗ್ರಹ ನಕ್ಷತ್ರಗಳ ತನಕ ನಾವು ಕಾಣುವ ಮತ್ತು ನಮಗೆ ಕಾಣಿಸದಿರುವ ಸರ್ವ ವಸ್ತುಗಳ ಮಾಲಕನೂ ಅವನೆಂದೂ, ಸರ್ವ ಜೀವ ಜಾಲಗಳಿಗೆ ಅನ್ನಾಹಾರ ನೀಡುವವನೂ ಅವನೇ ಆಗಿದ್ದು ಜೀವನ ಮತ್ತು ಮರಣವೂ ಅವನ ಕೈಯಲ್ಲೇ ಇದೆ. ಅವನು ಸರ್ವ ವಸ್ತುಗಳ ಮೇಲೆ ಸಾಮರ್ಥ್ಯವಿರುವವನಾಗಿದ್ದಾನೆ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

**ಅಲ್ಲಾಹನು ಆಕಾಶದಲ್ಲಿದ್ದಾನೆ**

ಸರ್ವ ಪ್ರವಾದಿಗಳೂ ಅಲ್ಲಾಹನು ಅತ್ಯುನ್ನತನು ಪ್ರತಿಷ್ಠಿತ ಸ್ಥಾನದಲ್ಲಿ ಉಪವಿಷ್ಟನು. ಲೋಕಕಂಡ ಅವನ ಸೃಷ್ಟಿಗಳ ನಿಯಂತ್ರಣವು ಅವನಲ್ಲೇ ಇದೆ ಎಂದು ಸಾರಿದರು. ಫಿರ್‌ಔನ್ ತನ್ನ ಮಂತ್ರಿ ಹಾಮಾನನೊಂದಿಗೆ ಹೇಳಿದ್ದು.

ابْنِ لِيْ صَرْحًا لَّعَلِّيْ اَبْلُغُ الْاَسْبَابَ • اَسْبَابَ السَّمٰوٰتِ فَاَطَّلِعَ اِلٰىٓ اِلٰهِ مُوْسٰى•(سورة غافر،الآيتان٣٦-٣٧)

**"ಫಿರ್‌ಔನ್ ಹೇಳಿದನು, ಹಾಮಾನ್, ನಾನು ಆಕಾಶಗಳ ಮಾರ್ಗಗಳ ವರೆಗೆ ತಲುಪುವಂತಾಗಲು ಮತ್ತು ಮೂಸಾನ ದೇವನನ್ನು ಇಣುಕಿನೋಡುವಂತಾಗಲು ನನಗಾಗಿ ಒಂದು ಉನ್ನತ ಕಟ್ಟಡವನ್ನು ನಿರ್ಮಿಸು". (40/36-37)**

ಮೂಸಾ(ಅ) ಫಿರ್‌ಔನನಿಗೆ ಅಲ್ಲಾಹು ಆಕಾಶಗಳ ಮೇಲಿರುವನೆಂದು ಹೇಳಿದ್ದರು. ಆದ್ದರಿಂದಲೇ ಅಹಂಭಾವಿಯಾದ ಅಕ್ರಮಿಯು ಇಂತಹಾ ಕೆಟ್ಟ ಮತ್ತು ಕೀಳ್ಮಟ್ಟದ ಮಾತುಗಳಿಂದ ತನ್ನ ಮೇಲ್ಮೆ ಪ್ರದರ್ಶಿಸಲು ನೋಡುತ್ತಿದ್ದಾನೆ.

**ಈಸಾ(ಅ) ಕೂಡಾ ಅಲ್ಲಾಹನ ಅತ್ಯುನ್ನತ ಗುಣನಾಮಗಳನ್ನು ಪ್ರಸ್ತಾಪಿಸಿದ್ದರು.**

ಅಲ್ಲಾಹನು ಸೂರಃ ಮಾಇದದಲ್ಲಿ ಹಝ್ರತ್ ಈಸಾ(ಅ) ಮತ್ತು ಅವರ ಸಹಾಯಿಗಳಾದ ಹವಾರಿಗಳ ಕುರಿತೂ ಇದೇ ಅರ್ಥ ಸೂಚಿಸುವಂತಹಾ ಮಾತುಗಳನ್ನು ಉಲ್ಲೇಖಿಸಿದ್ದಾನೆ.

اِذْقَالَ الْحَوَارِيُّوْنَ يٰعِيْسَى ابْنَ مَرْيَمَ هَلْ يَسْتَطِيْعُ رَبُّكَ اَنْ يُّنَزِّلَ عَلَيْنَا مَآئِدَةً مِّنَ السَّمَآءِ قَالَ اتَّقُوااللّٰهَ اِنْ كُنْتُمْ مُّؤْمِنِيْنَ • قَالُوْا نُرِيْدُ اَنْ نَّاْكُلَ مِنْهَاوَتَطْمَئِنَّ قُلُوْبُنَا وَنَعْلَمَ اَنْ قَدْ صَدَقْتَنَا وَنَكُوْنَ عَلَيْهَا مِنَ الشّٰهِدِيْنَ • قَالَ عِيْسَى ابْنُ مَرْيَمَ اللّٰهُمَّ رَبَّنَآاَنْزِلْ عَلَيْنَا مَآئِدَةً مِّنَ السَّمَآءِ تَكُوْنُ لَنَا عِيْدًا لِّاَوَّلِنَا وَاٰخِرِنَا وَاٰيَةً مِّنْكَ وَارْزُقْنَا وَاَنْتَ خَيْرُالرّٰزِقِيْنَ • قَالَ اللّٰهُ اِنِّيْ مُنَزِّلُهَا عَلَيْكُمْ فَمَنْ يَّكْفُرْ بَعْدُ مِنْكُمْ فَاِنِّيْٓ اُعَذِّبُهٗ عَذَابًا لَّآاُعَذِّبُهٗٓ اَحَدًامِّنَ الْعٰلَمِيْنَ•(سورة المائدة، الآيات ١١٢-١١٥)

**"(ಹವಾರಿಗಳಿಗೆ ಸಂಬಂಧಿಸಿದ) ಈ ಘಟನೆಯೂ ನೆನಪಿರಲಿ, ಹವಾರಿಗಳು ಓ ಮರ್ಯಮರ ಪುತ್ರ ಈಸಾ, ನಿಮ್ಮ ಪ್ರಭು ನಮ್ಮ ಮೇಲೆ ಆಕಾಶದಿಂದ ಊಟದ ಹರಿವಾಣವನ್ನು ಇಳಿಸಬಲ್ಲನೇ? ಎಂದು ಕೇಳಿದಾಗ ಈಸಾರವರು ನೀವು ಸತ್ಯವಾದಿಗಳಾಗಿದ್ದರೆ ಅಲ್ಲಾಹನನ್ನು ಭಯಪಡಿರೆಂದರು,**

ಆಗ ಅವರು ಆ ಹರಿವಾಣದಿಂದ ಉಣ್ಣುವಂತಾಗಲಿಕ್ಕೂ ಅದರಿಂದ ನಮ್ಮ ಮನಸ್ಸಿನಲ್ಲಿ ಶಾಂತಿ ಉಂಟಾಗಲಿಕ್ಕೂ ತಾವು ನಮ್ಮೊಡನೆ ಹೇಳಿದುದೆಲ್ಲ ಸತ್ಯವೆಂದು ನಮಗೆ ತಿಳಿದು ಬರಲಿಕ್ಕೂ ನಾವು ಅದರ ಬಗ್ಗೆ ಸಾಕ್ಷಿಗಳಾಗಿರಲಿಕ್ಕೂ ಬಯಸುತ್ತೇವೆ" ಎಂದರು. ಆಗ ಮರ್ಯಮರ ಪುತ್ರ ಈಸಾ ಹೀಗೆ ಪ್ರಾರ್ಥಿಸಿದರು. "ಓ ಅಲ್ಲಾಹ್! ನಮ್ಮ ಪ್ರಭೂ! ಆಕಾಶದಿಂದ ನಮಗೊಂದು ಊಟದ ಹರಿವಾಣವನ್ನು ಇಳಿಸು. ಅದು ನಮಗೂ ನಮ್ಮ ಹಿಂಗಾಮಿಗಳಿಗೂ ಮುಂಗಾಮಿಗಳಿಗೂ ಸಂತಸದ ಸಂದರ್ಭವಾಗಿಯೂ ನಿನ್ನ ಕಡೆಯಿಂದ ಒಂದು ದೃಷ್ಟಾಂತವಾಗಿಯೂ ಪರಿಣಮಿಸಲಿ. ನಮಗೆ ಆಹಾರ ಪ್ರದಾನ ಮಾಡು ನೀನು ಅತ್ಯುನ್ನತ ಅನ್ನದಾತನು". ಅಲ್ಲಾಹು ಉತ್ತರ ನೀಡಿದನು, "ನಾನು ಅದನ್ನು ನಿಮ್ಮ ಮೇಲೆ ಇಳಿಸುವವನಿದ್ದೇನೆ. ಆದರೆ ಅನಂತರ ನಿಮ್ಮ ಪೈಕಿ ಸತ್ಯ ನಿಷೇಧ ಕೈಗೊಂಡವನಿಗೆ ಜಗತ್ತಿನಲ್ಲಿ ಬೇರಾರಿಗೂ ಕೊಡದಂತಹಾ ಶಿಕ್ಷೆ ಕೊಡುವೆನು". (5/112-115)

## ಅಲ್ಲಾಹನು "ಅತ್ಯುನ್ನತನು" ಎಂಬ ವಾಸ್ತವಿ ಕತೆಯನ್ನು ನಿರಾಕರಿಸಿದ ಜಹಮಿಯ ಮತ್ತು ಇತರ ಪಥಭ್ರಷ್ಟ ವಿಭಾಗಗಳು :

ಈ ಹಿಂದೆ ಉಲ್ಲೇಖಿಸಿದ ಅಲ್ಲಾಹನ ವಚನಗಳಲ್ಲಿ ಅಲ್ಲಾಹನು ಪರಿಶುದ್ಧನೆಂದೂ ಅವನು ಸರ್ವ ಚರಾಚರ ವಸ್ತು ಮತ್ತು ಜೀವಿಗಳ ಮೇಲೆ ನಿಯಂತ್ರಣ ಹೊಂದಿರುವನೆಂದೂ ತಿಳಿಸಲಾಗಿದೆ. ಅವನು ಅತೀ ಉನ್ನತವಾದ ಸ್ಥಾನದಲ್ಲಿರುವುದನ್ನು ಈ ವಚನಗಳು ದೃಢೀಕರಿಸುತ್ತದೆ. ಏಕೆಂದರೆ 'ಅಂಝೂಲ್'ಅಥವಾ ಇಳಿಸಿಕೊಡುವುದೆನ್ನುವಾಗ ಅದು ಮೇಲಿನಿಂದ ಕೆಳಕ್ಕೆ ಎನ್ನುವುದು ವ್ಯಕ್ತವಾಗುತ್ತದೆ.

ಮಾಇದಾ ಅಥವಾ ಆಹಾರಗಳಿಂದ ತುಂಬಿದ ಊಟದ ಮೇಜನ್ನು ಇಳಿಸಿಕೊಡುವುದು ಮತ್ತು ಜನರು ಅದನ್ನು ಇಳಿಸಿಕೊಡುವಂತೆ ಪ್ರಾರ್ಥಿಸುವುದು ಇದೆಲ್ಲವೂ ಆ ಸಮುದಾಯವು ಅವರ ಪ್ರಭು ಅತ್ಯುನ್ನತ ಸ್ಥಾನದಲ್ಲಿರುವುದನ್ನು ಅರಿತುಕೊಂಡಿದ್ದರು ಎನ್ನುವುದಕ್ಕೆ ಪ್ರಮಾಣಗಳಾಗಿವೆ. ಅವರು ಅಲ್ಲಾಹ್‌ನ ಕುರಿತು ಅಪಾರ ಅರಿವನ್ನು ಹೊಂದಿದ್ದರು. ತದ್ವಿರುದ್ಧವಾಗಿ ಜಹ್‌ಮಿಯ ಮತ್ತು ಇತರ ಕೆಲವು ಪಥಭ್ರಷ್ಟ ವಿಭಾಗಗಳು ಅಲ್ಲಾಹನು ಎತ್ತರದಲ್ಲಿ ಅಥವಾ ಅತ್ಯುನ್ನತ ಸ್ಥಾನದಲ್ಲಿರುವನು ಎನ್ನುವುದನ್ನು ನಿರಾಕರಿಸಿ ಬಿಟ್ಟರು.

ಹವಾರಿಗಳು ಅಲ್ಲಾಹನು ಅತ್ಯುನ್ನತ ಸ್ಥಾನದಲ್ಲಿರುವನೆಂಬುದನ್ನು ಅಂಗೀಕರಿಸಿ ಅನುಕರಿಸಿದರು. ಈಸಾ(ಅ) ಕೂಡಾ ಅವರ ಮುಂದೆ ಇದನ್ನು ದೃಢೀಕರಿಸಿದ್ದರು. ಸ್ವತಹಾ ಅಲ್ಲಾಹನೇ ಇದನ್ನು ಸಾರುತ್ತಾ "

"إِنِّي مُنَزِّلُهَا عَلَيْكُمْ" (سورة المائدة،الآية ١١٥)

**"ನಾನು ಅದನ್ನು ನಿಮ್ಮ ಮೇಲೆ ಇಳಿಸುವವನಿದ್ದೇನೆ"** ಎಂದು ಹೇಳಿದ್ದಾನೆ.

ಇದರಿಂದ ನಮಗೆ ತಿಳಿದು ಬರುವುದೇನೆಂದರೆ, ನಮ್ಮನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವ

ನಮ್ಮ ಪ್ರಭು ಮೇಲಿನಿಂದಲೇ ನಮ್ಮ ಅಹವಾಲುಗಳನ್ನು, ಪ್ರಾರ್ಥನೆಗಳನ್ನು ಆಲಿಸುತ್ತಾನೆ. ಅವನು ಅವನ ಮೇಲ್ಮೆ ಮತ್ತು ಸ್ಥಾನಮಾನಕ್ಕೆ ತಕ್ಕಂತೆ ಅವನ ಅರ್ಶ್‌ನಲ್ಲಿ ಉಪವಿಷ್ಟನಿದ್ದಾನೆ. ಅವನ ಸೃಷ್ಟಿಗಳಲ್ಲಿ ಯಾರಿಗೂ ಅವನ ನಾಮ ವಿಶೇಷಣಗಳ ಪೈಕಿ ಯಾವುದೇ ಒಂದು ಕೂಡಾ ಅನ್ವರ್ಥವೆನಿಸುವುದಿಲ್ಲ.

ಈ ಕುರಿತಾಗಿ ಹಲವಾರು ವಚನಗಳಿವೆ. ಅವೆಲ್ಲವೂ ಅಲ್ಲಾಹನು ಅವನ ಎಲ್ಲಾ ಸೃಷ್ಟಿಗಳಿಗೆ ಉನ್ನತವಾದ ಸ್ಥಾನದಲ್ಲಿ ವಿರಾಜಮಾನನೆಂಬುದನ್ನು ದೃಢೀಕರಿಸುತ್ತದೆ.

ಏಳು ಪ್ರಖ್ಯಾತವಿರುವ ವಚನಗಳಲ್ಲಿ 'ಇಸ್ತವಾ' ಎನ್ನುವ ಶಬ್ಧ ಬಳಸಲಾಗಿದೆ. ಅದರಲ್ಲಿ **ಸೂರಃ ಅಲ್‌ರಾಫ್‌ನ ಈ ವಚನವೂ ಒಂದು.**

**اِنَّ رَبَّكُمُ اللّٰهُ الَّذِىْ خَلَقَ السَّمٰوٰتِ وَالْاَرْضَ فِىْ سِتَّةِ اَيَّامٍ ثُمَّ اسْتَوٰى عَلَى الْعَرْشِ يُغْشِى الَّيْلَ النَّهَارَ يَطْلُبُهٗ حَثِيْثًا وَّالشَّمْسَ وَالْقَمَرَ وَالنُّجُوْمَ مُسَخَّرٰتٍ بِاَمْرِهٖ اَلَا لَهُ الْخَلْقُ وَالْاَمْرُ تَبٰرَكَ اللّٰهُ رَبُّ الْعٰلَمِيْنَ•**(سورة الاعراف، الآية٥٤)

**"ವಾಸ್ತವದಲ್ಲಿ ನಿಮ್ಮ ಪ್ರಭು ಅಲ್ಲಾಹನೇ ಆಗಿರುತ್ತಾನೆ. ಅವನು ಭೂಮಿ ಆಕಾಶಗಳನ್ನು ಆರು ದಿನಗಳಲ್ಲಿ ಸೃಷ್ಟಿಸಿದನು. ತರುವಾಯ ತನ್ನ "ಅರ್ಶ್"ನಲ್ಲಿ ವಿರಾಜಮಾನನಾದನು. ಅವನು ಇರುಳನ್ನು ಹಗಲ ಮೇಲೆ ಹರಡುತ್ತಾನೆ. ಮತ್ತು ರಾತ್ರಿಯನ್ನು ಹಗಲು ಹಿಂಬಾಲಿಸಿಕೊಂಡು ಓಡಿಬರುತ್ತದೆ. ಅವನು ಸೂರ್ಯನನ್ನೂ, ಚಂದ್ರನನ್ನೂ, ನಕ್ಷತ್ರಗಳನ್ನೂ, ಸೃಷ್ಟಿಸಿದನು. ಎಲ್ಲವೂ ಅವನ ಆಜ್ಞಾಧೀನವಾಗಿದೆ. ಎಚ್ಚರಿಕೆ! ಅವನದೇ ಸೃಷ್ಟಿ, ಅವನದೇ ಅಪ್ಪಣೆ. ಸರ್ವಲೋಕಗಳ ಒಡೆಯನೂ ಪ್ರಭವೂ ಆಗಿರುವ ಅಲ್ಲಾಹನು ಮಹಾ ಸಮೃದ್ಧನು"**

ಈ ವಚನದಲ್ಲಿ ಸರ್ವಲೋಕಗಳ ಒಡೆಯನಾದ ಅಲ್ಲಾಹನು ತಾನು ಅತ್ಯುನ್ನತ ನೆನ್ನುವುದನ್ನು ಘೋಷಿಸಿಕೊಳ್ಳುತ್ತಾನೆ. ಮಾತ್ರವಲ್ಲದೆ **ಸರ್ವ ಚರಾಚರಗಳನ್ನು ಸೃಷ್ಟಿಸಿದವನೂ,ಅವುಗಳಿಗೆ ಆದೇಶಗಳನ್ನು ನೀಡುವವನೂ ಅವನೇ ಹಗಲನ್ನೂ-ಇರುಳನ್ನೂ ಪೋಣಿಸಿದವನೂ ಸೂರ್ಯ-ಚಂದ್ರ-ನಕ್ಷತ್ರಾದಿಗಳನ್ನು ಸೃಷ್ಟಿಸಿದವನೂ ಅವುಗಳಿಗೆ ದಿಕ್ಕು-ದೆಸೆಯನ್ನು ನಿರ್ಧರಿಸಿ ಕೊಟ್ಟವನೂ ಅವನೇ ಎನ್ನುವುದನ್ನು ಇಲ್ಲಿ ದೃಢೀಕರಿಸುತ್ತಾನೆ.** ಔನ್ನತ್ಯ ಅವನ ಹಿರಿಮೆಯಾಗಿದೆ. ಅವನ ಪರಿಪೂರ್ಣ ಜ್ಞಾನ ಮತ್ತು ಶಕ್ತಿಯ ಕುರಿತು ಚೆನ್ನಾಗಿ ಅರಿಯುವುದು ಮತ್ತು ಅವನು ತನ್ನ ಸೃಷ್ಟಿಗಳ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರುವನೆಂಬುವುದನ್ನು ಮನಗಾಣುವುದು ಮತ್ತು ಎಲ್ಲಾ ಸ್ಥಿತಿಯಲ್ಲೂ ಆರಾಧನೆಯನ್ನು ಅವನಿಗೇ ಸಲ್ಲಿಸುವುದು ಅನಿವಾರ್ಯವಾಗಿದೆ.

**ಆರಾಧನಾರ್ಹನು ಕೇವಲ ಅಲ್ಲಾಹನೆಂದ ಈಸಾ(ಅ) ಅಲ್ಲಾಹನ ಗುಣನಾಮಗಳನ್ನು ಪ್ರಚುರಪಡಿಸಿರುವರು:**

ಅಲ್ಲಾಹನು ಹೇಳುತ್ತಾನೆ,

وَاِذْقَالَ اللّٰهُ يٰعِيسَى ابْنَ مَرْيَمَ ءَ اَنْتَ قُلْتَ لِلنَّاسِ اتَّخِذُوْنِىْ وَاُمِّىَ اِلٰهَيْنِ مِنْ دُوْنِ اللّٰهِ قَالَ سُبْحٰنَكَ مَايَكُوْنُ لِىْ اَنْ اَقُوْلَ مَالَيْسَ لِىْ بِحَقٍّ اِنْ كُنْتُ قُلْتُهٗ فَقَدْ عَلِمْتَهٗ تَعْلَمُ مَافِىْ نَفْسِىْ وَلَا اَعْلَمُ مَافِىْ نَفْسِكَ اِنَّكَ اَنْتَ عَلَّامُ الْغُيُوْبِ • مَاقُلْتُ لَهُمْ اِلَّا مَااَمَرْتَنِىْ بِهٖ اَنِ اعْبُدُوااللّٰهَ رَبِّىْ وَرَبَّكُمْ وَكُنْتُ عَلَيْهِمْ شَهِيْدًا مَّادُمْتُ فِيْهِمْ فَلَمَّا تَوَفَّيْتَنِىْ كُنْتَ اَنْتَ الرَّقِيْبَ عَلَيْهِمْ وَاَنْتَ عَلٰى كُلِّ شَىْءٍ شَهِيْدٌ • اِنْ تُعَذِّبْهُمْ فَاِنَّهُمْ عِبَادُكَ. وَاِنْ تَغْفِرْلَهُمْ فَاِنَّكَ اَنْتَ الْعَزِيْزُ الْحَكِيْمُ• (سورةالمائدة، الآيات ١١٦-١١٨)

"ಓ ಮರ್ಯಮರ ಪುತ್ರ ಈಸಾ, ಅಲ್ಲಾಹನ ಹೊರತು ನನ್ನನ್ನೂ ನನ್ನ ಮಾತೆಯನ್ನೂ ದೇವರನ್ನಾಗಿ ಮಾಡಿಕೊಳ್ಳಿರೆಂದು ನೀವು ಜನರೊಡನೆ ಹೇಳಿದ್ದೀರಾ?" ಎಂದು ಅಲ್ಲಾಹನು ಕೇಳುವಾಗ ಅವರು ಉತ್ತರಿಸುವರು. ನೀನು ಪರಮ ಪಾವನನು ನನಗೆ ಹೇಳಲು ಹಕ್ಕಿಲ್ಲದಂತಹಾ ಮಾತನ್ನು ಹೇಳುವ ಕಾರ್ಯ ನನ್ನದಾಗಿರಲಿಲ್ಲ. ನಾನು ಹಾಗೆ ಹೇಳಿರುತ್ತಿದ್ದರೆ ಅದು ನಿಶ್ಚಯವಾಗಿಯೂ ನಿನಗೆ ತಿಳಿದಿರುತ್ತಿತ್ತು. ನನ್ನ ಮನಸ್ಸಿನಲ್ಲಿರುವುದು ನಿನಗೆ ಗೊತ್ತಿದೆ. ನಿನ್ನ ಮನಸ್ಸಿನಲ್ಲಿರುವುದು ನನಗೆ ಗೊತ್ತಿಲ್ಲ. ನೀನು ಸಕಲ ರಹಸ್ಯ ಪರಮಾರ್ಥಗಳ ಜ್ಞಾನಿಯಾಗಿರುತ್ತಿ. ನೀನು ನನಗೆ ನೀಡಿದ ಆಜ್ಞೆಯ ವಿನಾ ಇನ್ನೇನನ್ನೂ ನಾನು ಅವರಲ್ಲಿ ಹೇಳಿಲ್ಲ. ಅದು "ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವ ಅಲ್ಲಾಹನ ಆರಾಧನೆ ಮಾಡಿರಿ" ಎಂದಾಗಿತ್ತು. ನಾನು ಅವರೊಡನೆ ವಾಸಿಸಿದ್ದ ಕಾಲದ ವರೆಗೆ ಮಾತ್ರ ನಾನು ಅವರ ಮೇಲ್ವಿಚಾರಕನಾಗಿದ್ದೆ. ಮತ್ತು ನೀನಂತೂ ಸಕಲ ವಸ್ತುಗಳ ಮೇಲ್ನೋಟವಿರಿಸುವವನಾಗಿರುತ್ತಿ. ನೀನು ಅವರಿಗೆ ಶಿಕ್ಷೆ ಕೊಟ್ಟರೆ ಖಂಡಿತವಾಗಿಯೂ ಅವರು ನಿನ್ನ ದಾಸರೇ ಮತ್ತು ಅವರನ್ನು ನೀನು ಕ್ಷಮಿಸಿ ಬಿಟ್ಟರೆ ನಿಶ್ಚಯವಾಗಿಯೂ ನೀನು ಅಜೇಯನೂ ಯುಕ್ತಿ ಪೂರ್ಣನೂ ಆಗಿರುತ್ತಿ"

**ಅಲ್ಲಾಹನ ಗುಣ ವಿಶೇಷಣಗಳು ಕೇವಲ ಅಲ್ಲಾಹನನ್ನು ಮಾತ್ರ ಆರಾಧಿಸುವಂತೆ ಕರೆ ನೀಡುತ್ತದೆ.**

ಸ್ವಲ್ಪ ಶಾಂತ ಚಿತ್ತದಿಂದ ಆಲೋಚಿಸಿರಿ! ಅಲ್ಲಾಹ್‌ನ ಗುಣನಾಮಗಳನ್ನು ಅರಿತುಕೊಳ್ಳುತ್ತಾ ಹೋದಂತೆ ನಮ್ಮ ಆರಾಧನೆ -ಪೂಜೆ -ಉಪಾಸನೆಗಳಿಗೆ ಅತ್ಯಂತ ಅರ್ಹನಾದವನು ಯಾರಾದರೂ ಇದ್ದರೆ, ಅದು ಕೇವಲ ಅಲ್ಲಾಹು ಆಗಿದ್ದಾನೆನ್ನುವುದು ದೃಢವಾಗುತ್ತದೆ.

ಅವನಷ್ಟೇ ಅಂತರ್ಯವನ್ನು ಅರಿಯುವವನು, ಅದೃಶ್ಯವನ್ನು ಕಾಣುವವನು ಅಜೇಯನು,

ಅನಂತನು, ಯುಕ್ತಿ ಪೂರ್ಣನು.ಅವನೇ ಸರ್ವಜೀವ ಜಾಲಗಳ ಮೇಲೆ ನಿಗಾವಹಿಸುವವನು. ಅವುಗಳ ಸರ್ವ ಚಲನ-ವಲನಗಳನ್ನು ಕಾಣುವವನೂ ಅದಕ್ಕೆ ಸಾಕ್ಷ್ಯ ವಹಿಸುವವನೂ ಆಗಿದ್ದಾನೆ. ಅವನು ತನ್ನ ಸಂದೇಶ ವಾಹಕ ಈಸ(ಅ) ರವರ ಹೃದಯಾಂತರಾಳವನ್ನು ಅರಿತವನು. ಅದೇ ಅಲ್ಲಾಹನ ಆಂತರ್ಯವನ್ನು ಈಸಾ(ಅ) ಎಂದೂ ಅರಿಯಲಾರರು.

## ಜಗತ್ತಿಗೆ ಪ್ರವಾದಿಗಳ ನಿಯುಕ್ತಿಯ ಉದ್ದೇಶವೇ ಅಲ್ಲಾಹನ ಗುಣನಾಮಗಳನ್ನು ಪರಿಚಯಿಸುವುದಾಗಿದೆ.

ಮೇಲೆ ಉಲ್ಲೇಖಿಸಲ್ಪಟ್ಟ ಕುರ್‌ಆನ್ ವಚನಗಳು ಅಲ್ಲಾಹನ ನಾಮ ವಿಶೇಷಣಗಳನ್ನು ದೃಢೀಕರಿಸುತ್ತದೆ. ಮಾತ್ರವಲ್ಲ ಜಗತ್ತಿಗೆ ಪ್ರವಾದಿಗಳ ನಿಯುಕ್ತಿಯ ಉದ್ದೇಶವೇ ಅಲ್ಲಾಹನ ಗುಣನಾಮಗಳನ್ನು ಪರಿಚಯಿಸುವುದಾಗಿದೆ ಎನ್ನುವುದನ್ನು ಸಾಬೀತು ಪಡಿಸುತ್ತದೆ.

## ಅಲ್ಲಾಹನ ಅಸ್ತಿತ್ವವೇ ಒಂದು ವೈಶಿಷ್ಟತೆಯಾಗಿದೆ

ಅಲ್ಲಾಹನ ಅಸ್ತಿತ್ವವೇ ಒಂದು ವೈಶಿಷ್ಟತೆಯಾಗಿದೆ. ಅವನಿಗೆ ಹೋಲುವ ಅಥವಾ ತುಲ್ಯವಾದ ಇತರ ಯಾವುದೂ ಇರುವುದಿಲ್ಲ. ಅವನ ಸೃಷ್ಟಿಗಳ ಪೈಕಿ ಯಾವುದೂ ಅವನಿಗೆ ಹೋಲಿಕೆಯಾಗದು. ಈ ವೈಶಿಷ್ಟತೆಯು ಅವನ ಮಟ್ಟಿಗೆ ಅವನ ಇತರ ವೈಶಿಷ್ಟತೆಗಳಂತೆಯೇ ಅವನಿಗೇ ಸೀಮಿತವಾದುದಾಗಿದೆ. ಉದಾ: ಅವನ ಮುಖ, ಕೈ, ಕಾಲು, ಬೆರಳುಗಳು ಇದು ಯಾವುದೂ ಅವನ ಸೃಷ್ಠಿಗಳಿಗೆ ಹೋಲಿಕೆಯಾಗಲಾರದು.

ಈ ಕುರಿತು ಕೆಲವು ಪವಿತ್ರ ಕುರ್‌ಆನಿನಲ್ಲಿ ಉಲ್ಲೇಖಕೊಂಡಿದ್ದರೆ ಇನ್ನು ಕೆಲವು ಪವಿತ್ರ ಹದೀಸ್‌ಗಳಲ್ಲಿ (ಉದಾ: ಮುಖ, ಕೈ, ಕಾಲು, ಬೆರಳು) ಉಲ್ಲೇಖಗೊಂಡಿದೆ.

ಅಲ್ಲಾಹನ ವೈಶಿಷ್ಟತೆಗಳು ಮತ್ತು ಗುಣನಾಮಗಳಿಗೆ ಹೋಲಿಕೆಯಾಗುವುದು ಯಾವುದೂ ಇಲ್ಲ

ಅವನು ವೈಶಿಷ್ಟತೆಗಳು ಅಲ್ಲಾಹನು ಪರಿಪೂರ್ಣನೆಂಬುದಕ್ಕೆ ಸಾಕ್ಷ್ಯವಹಿಸುತ್ತದೆ. ಈ ವೈಶಿಷ್ಟತೆಗಳನ್ನು ಅಂಗೀಕರಿಸಿಕೊಳ್ಳುವುದಕ್ಕೆ ಅವನನ್ನು ಸೃಷ್ಠಿಗಳಿಗೆ ಹೋಲಿಕೆ ಮಾಡುವುದು ಅನಿವಾರ್ಯವೇನಲ್ಲ.

ಅಲ್ಲಾಹನೇ ಹೇಳುತ್ತಾನೆ,

لَيۡسَ كَمِثۡلِهِۦ شَيۡءٞۖ وَهُوَ ٱلسَّمِيعُ ٱلۡبَصِيرُ (سورة الشورى، الآية١١)

**"ವಿಶ್ವದ ಯಾವ ವಸ್ತುವೂ ಅವನನ್ನು ಹೋಲುವುದಿಲ್ಲ. ಅವನು ಎಲ್ಲವನ್ನೂ ಆಲಿಸುವವನೂ ವೀಕ್ಷಿಸುವವನೂ ಆಗಿದ್ದಾನೆ"**(42-11)

ಇಲ್ಲಿ ಪರಿಶುದ್ಧನಾದ ಅಲ್ಲಾಹನು ತನ್ನನ್ನು ಇತರ ಯಾವುದೇ ವಸ್ತುವಿಗೆ ಹೋಲಿಸುವ ಕುರಿತು ವಿರೋಧವನ್ನು ವ್ಯಕ್ತಪಡಿಸಿದ್ದಾನೆ ಮತ್ತು ವಿಶಿಷ್ಟಪೂರ್ಣವಾದ ತನ್ನ ಅಸ್ತಿತ್ವಕ್ಕೆ ಸರಿಸಮಾನವಾದುದೇನೂ ಇಲ್ಲವೆಂದು ಸಾರಿದ್ದಾನೆ.

ಬಳಿಕ ಅವನು ತನ್ನ ವೈಶಿಷ್ಟತೆಗಳಲ್ಲಿ ಆಲಿಸುವುದೂ, ಕಾಣುವುದೂ ಸೇರಿಕೊಂಡಿದೆ ಎಂದು ಹೇಳಿದ್ದಾನೆ. ಇಲ್ಲಿ ಸ್ಪಷ್ಟವಾಗುವುದೇನೆಂದರೆ ಅವನ ಶ್ರವಣ ಶಕ್ತಿ ಮತ್ತು ದೃತ್ ಶಕ್ತಿಯು ಕೂಡಾ ಉಪಮೆಗೆ ನಿಲುಕಲಾರದು. ಅವನು ನೋಡಿದಂತೆ ನೋಡುವ, ಆಲಿಸಿದಂತೆ ಆಲಿಸುವ ಸಾಮರ್ಥ್ಯವೂ ಯಾರಿಗೂ ಇರುವುದಿಲ್ಲ ಸರ್ವಶಕ್ತನಾದ ಅಲ್ಲಾಹನು ತನ್ನ ಅಸ್ತಿತ್ವ, ತನ್ನ ಗುಣ ಮತ್ತು ನಾಮಗಳಲ್ಲಿ ಮತ್ತು ಪ್ರವರ್ತನೆಗಳಲ್ಲಿ ಪರಿಪೂರ್ಣನಾಗಿದ್ದಾನೆ. ಆದ್ದರಿಂದ ಆರಾಧನೆಗೆ ಅತ್ಯಂತ ಅರ್ಹನಾದವನು ಅವನೇ ಆಗಿದ್ದು. ಅವನ ಮಹಾನತೆಗಳೇ ಕೊಂಡಾಡಲು ಯೋಗ್ಯವಾಗಿದೆ.

**ಅಲ್ಲಾಹನ ಅಸ್ತಿತ್ವವು ಶಾಶ್ವತವೂ ಸೃಷ್ಟಿಗಳ ಅಸ್ತಿತ್ವವು ನಶ್ವರವೂ ಆಗಿದೆ.**

ಇನ್ನೀಗ ಸೃಷ್ಟಿಗಳ ಅಸ್ತಿತ್ವದ ಕುರಿತು ನೋಡೋಣ. ಅವೆಲ್ಲವೂ ನಶ್ವರವಾಗಿದೆ. ಆದರೆ ಸರ್ವಶಕ್ತನಾದ ಅಲ್ಲಾಹನು ಪ್ರತಿಯೊಂದು ವಿಷಯದಲ್ಲೂ ಪರಿಪೂರ್ಣನಾಗಿದ್ದಾನೆ. ಅವನ ಅರಿವೂ-ಜ್ಞಾನವೂ ಪರಿಪೂರ್ಣವಾಗಿದೆ. ಅವನು ಪರಿಪೂರ್ಣ ಶಕ್ತಿ-ಸಾಮಥ್ಯ ಹೊಂದಿದವನು. ಸೃಷ್ಠಿಗಳ ಅಸ್ತಿತ್ವವು ಎಂದೂ ಯಾವುದೇ ರೀತಿಯಲ್ಲೂ ಅಲ್ಲಾಹನ ವೈಶಿಷ್ಟ್ಯತೆಗಳೊಂದಿಗೆ ತಾಳೆಯಾಗಲಾರದು. ಅದರಿಂದಲೇ ಅಲ್ಲಾಹು ಹೇಳುತ್ತಾನೆ.

فَلاَ تَضْرِبُوا لِلّٰهِ الْاَمْثَالَ اِنَّ اللّٰهَ يَعْلَمُ وَاَنْتُمْ لاَ تَعْلَمُوْنَ (سورة النحل، الآية ٧٤)

**"ಆದುದರಿಂದಲೇ ಅಲ್ಲಾಹನಿಗೆ ಹೋಲಿಕೆಗಳನ್ನು ಕಲ್ಪಿಸಬೇಡಿರಿ. ಅಲ್ಲಾಹನಿಗೆ ತಿಳಿದಿದೆ. ನಿಮಗೆ ತಿಳಿದಿಲ್ಲ"**(16-74)

ಇನ್ನೊಂದು ಕಡೆ ಅಲ್ಲಾಹು ಹೇಳುತ್ತಾನೆ,

قُلْ هُوَ اللّٰهُ اَحَدٌ • اَللّٰهُ الصَّمَدُ • لَمْ يَلِدْ وَلَمْ يُوْلَدْ • وَلَمْ يَكُنْ لَّهُ كُفُوًا اَحَدٌ • (سورة الاخلاص كاملة)

**"ಹೇಳಿರಿ (ಪ್ರವಾದಿಗಳೇ!) ಅಲ್ಲಾಹನು ಏಕನು. ಅಲ್ಲಾಹು ನಿರಪೇಕ್ಷನು ಅವನಿಗೆ ಯಾವ ಸಂತಾನವೂ ಇಲ್ಲ. ಅವನು ಯಾರ ಸಂತಾನವೂ ಅಲ್ಲ. ಅವನಿಗೆ ಸರಿಸಮಾನರಾಗಿ ಯಾರೂ ಇಲ್ಲ"**

ಇನ್ನೊಂದು ಕಡೆ ಅಲ್ಲಾಹನು ಹೇಳುತ್ತಾನೆ.

لَيْسَ كَمِثْلِهٖ شَيْءٌ وَهُوَ السَّمِيْعُ الْبَصِيْرُ • (سورة الشورى، الآية ١١)

**"ವಿಶ್ವದ ಯಾವ ವಸ್ತುವೂ ಅವನನ್ನು ಹೋಲುವುದಿಲ್ಲ. ಅವನು ಎಲ್ಲವನ್ನು ಅರಿಯುವವನೂ ವೀಕ್ಷಿಸುವವನೂ ಆಗಿದ್ದಾನೆ"**(42-11)

**ಅಹ್ಲ್ ಸುನ್ನತ್‌ವಲ್ ಜಮಾಅತ್, ಅಲ್ಲಾಹನ ನಾಮಗಳು ಮತ್ತು ಅವನ ಎಲ್ಲಾ ಗುಣವಿಶೇಷಗಳನ್ನು ಅವನ ಮಹಾನತೆಗನುಗುಣವಾಗಿ ಅಂಗೀಕರಿಸುತ್ತದೆ.**

ಅಹ್ಲ್ ಸುನ್ನತ್‌ವಲ್ ಜಮಾಅತ್, ಅಲ್ಲಾಹನ ನಾಮಗಳು ಮತ್ತು ಅವನ ಗುಣ ವಿಶೇಷಣಗಳನ್ನು ಅವನ ಮಹಾನತೆಗೆ ತಕ್ಕುದಾದಂತೆ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಸುಸ್ಪಷ್ಟವಾಗಿ ತಿಳಿಸಲಾದ ಪ್ರಕಾರವೇ ಅಂಗೀಕರಿಸುತ್ತದೆ. ಅದರಲ್ಲಿ ಯಾವುದೇ ರೀತಿಯ ಬದಲಾವಣೆ ಮಾಡುವುದು, ಅಥವಾ ಅದನ್ನು ನಿರಾಕರಿಸುವುದು ಅಥವಾ ಆ ಗುಣ ವಿಶೇಷಣಗಳ ಕುರಿತು ಚರ್ಚಿಸುವುದು ಅಥವಾ ಸೃಷ್ಟಿಗಳೊಂದಿಗೆ ಅವುಗಳನ್ನು ತುಲನೆ ಮಾಡುವುದು-ಹೋಲಿಸುವುದು ಅಥವಾ ಅವುಗಳಲ್ಲಿ ಯಾವುದೇ ರೀತಿಯ ಅತಿರೇಕ ಮತ್ತು ಕುಂದು ಕೊರತೆ ಉಂಟು ಮಾಡುವ ಕಾರ್ಯವನ್ನು ಎಂದಿಗೂ ಮಾಡುವುದಿಲ್ಲ.

ಯಾವ ರೀತಿ ಅದು ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ವರದಿ ಮಾಡಲ್ಪಟ್ಟಿದೆಯೊ ಅದೇ ಪ್ರಕಾರ ಯತಾವತ್ತಾಗಿ ಅದನ್ನು ಅಂಗೀಕರಿಸುವುದು ಮಾತ್ರವಲ್ಲದೆ, ಅದೆಲ್ಲವೂ ಸತ್ಯವೆಂದು ದೃಢಪಡಿಸಿಕೊಳ್ಳುವುದು ಮತ್ತು ವಿಶ್ವಾಸವಿಡುವುದನ್ನು ಅಹ್ಲ್ ಸುನ್ನತ್ ವಲ್ ಜಮಾಅತ್ ತನ್ನ ಮೇಲೆ ಕಡ್ಡಾಯಗೊಳಿಸಿಕೊಂಡಿದೆ. ಅದೆಲ್ಲವೂ ಪರಿಶುದ್ಧನಾದ ಅಲ್ಲಾಹನಿಗೆ ಸರ್ವ ಸಂಪೂರ್ಣವಾಗಿ ಅನ್ವರ್ಥವೆನಿಸುವುದೆಂದೂ, ಆ ನಾಮಗಳು ಮತ್ತು ವಿಶೇಷ ಗುಣಗಳು ಎಳ್ಳಷ್ಟೂ ಸೃಷ್ಟಿಗಳಲ್ಲಿ ಯಾರಿಗೂ ಹೊಂದುವುದಿಲ್ಲವೆನ್ನುವುದು ಆ ವಿಶ್ವಾಸದಲ್ಲಿ ಒಳಪಡುತ್ತದೆ.

ಅಲ್ಲಾಹನು ಹೇಳುತ್ತಾನೆ,

لَيْسَ كَمِثْلِهِ شَيْءٌ وَهُوَ السَّمِيعُ الْبَصِيرُ •(سورة الشورى، الآية ١١)

**“ವಿಶ್ವದ ಯಾವ ವಸ್ತುವೂ ಅವನನ್ನು ಹೋಲುವುದಿಲ್ಲ. ಅವನು ಎಲ್ಲವನ್ನೂ ಆಲಿಸುವವನೂ ವೀಕ್ಷಿಸುವವನೂ ಆಗಿದ್ದಾನೆ”**(42-11)

**ಕುರ್‌ಆನಿನಲ್ಲಿ ಅಲ್ಲಾಹನು ಪದೇ ಪದೇ ತನ್ನ ಗುಣನಾಮಗಳನ್ನು ಉಲ್ಲೇಖಿಸುವ ಉದ್ದೇಶ ತನ್ನ ದಾಸರು ತನ್ನ ಅತ್ಯುನ್ನತ ನಾಮ ಮತ್ತು ವಿಶೇಷಣಗಳನ್ನು, ಸಾಮರ್ಥ್ಯವನ್ನು ಅರಿತುಕೊಳ್ಳಲಿ ಮತ್ತು ನನ್ನನ್ನೇ ಆರಾಧಿಸಲಿ ಎಂದಾಗಿದೆ.**

ಇದು ತೌಹೀದ್‌ನ ಕೆಲವು ವಿಷಯಗಳಾಗಿವೆ. ವಿಷಯಗಳೆಂದರೆ ಬಹಳ ಪ್ರಾಮುಖ್ಯವಾದಂತಹಾ ವಿಷಯಗಳು. ಅಲ್ಲಾಹು ಪರಿಶುದ್ಧನು ತನ್ನ ಗ್ರಂಥದಲ್ಲಿ ತನ್ನ ನಾಮ ಮತ್ತು ಗುಣಗಳನ್ನು ಉಲ್ಲೇಖಿಸಿರುತ್ತಾನೆ. ಕೆಲವು ಸ್ಥಳಗಳಲ್ಲಿ ಮತ್ತೆ ಮತ್ತೆ ಅದನ್ನು ಪುನರಾವರ್ತಿಸಿದ್ದಾನೆ. ಇದು ತನ್ನ ದಾಸರು ತನ್ನ ನಾಮ-ಗುಣ ಮತ್ತು ಕಾರ್ಯವೈಖರಿಯನ್ನು ಅರಿತುಕೊಳ್ಳಲಿ ಎಂದಾಗಿದೆ. ವಾಸ್ತವದಲ್ಲಿ ಅವನ ಕಾರ್ಯವೈಖರಿಯು ಅತ್ಯಂತ ಪರಿಪೂರ್ಣವೂ-ಸುಂದರವೂ ಆಗಿರುತ್ತದೆ. ಅವನ ಎಲ್ಲಾ ಕಾರ್ಯವೂ ಅತ್ಯುನ್ನತವೂ ಶ್ರೇಷ್ಟವೂ ಆಗಿದೆ. ಅವನ

ಸರ್ವ ಗುಣಗಳೂ ಅತ್ಯುನ್ನತವೂ ಉದಾತ್ತವೂ ಆಗಿರುವುದು. ಈ ವಿಷಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ದಾಸನು ತನ್ನ ಸೃಷ್ಟಿಕರ್ತನನ್ನು, ಸಂರಕ್ಷಕನನ್ನು ಗುರುತಿಸಿಕೊಂಡು ಆತ್ಮಾರ್ಥತೆಯಿಂದ ಮತ್ತು ಸುದೃಢ ವಿಶ್ವಾಶದಿಂದ ಅವನನ್ನು ಆರಾಧಿಸಲಿ, ಈ ಅರಿವಿನ ಆಧಾರದಲ್ಲಿ ಅವನ ಕಡೆ ಗಮನ ಹರಿಸಲಿ ಎನ್ನುವುದು ಅವನ ಉದ್ದೇಶವಾಗಿದೆ. ದಾಸನ ಸಹಾಯ ಅಭ್ಯರ್ಥನೆಯನ್ನೂ ಪ್ರಾರ್ಥನೆಯನ್ನೂ ಅವನು ಆಲಿಸುತ್ತಾನೆ. ದಾಸನ ಅಳಲನ್ನೂ ಆಕ್ರಂದನವನ್ನೂ ಆಲಿಸಿ ಅದಕ್ಕೆ ಉತ್ತರಿಸುತ್ತಾನೆ. ಅವನು ಸರ್ವಶಕ್ತನೂ ಸರ್ವವಸ್ತುವಿನ ಮೇಲೆ ನಿಯಂತ್ರಣವಿರುವವನೂ ಆಗಿರುತ್ತಾನೆ.

## ಅಲ್ಲಾಹನನ್ನು ಬಿಟ್ಟು ಜಡವಸ್ತುಗಳನ್ನು ಪೂಜಿಸುವುದು ಬುದ್ಧಿ ಪತನಗೊಂಡ ಲಕ್ಷಣವಾಗಿದೆ.

ಈ ವಿಷಯಗಳ ಪೈಕಿ ಒಂದು ಅಲ್ಲಾಹನು ಮೂಸಾ(ಅ)ರವರ ಸಮುದಾಯವಾದ ಬನೂ ಇಸ್ರಾಯೀಲರ ಕುರಿತು ಹೇಳಿರುವುದಾಗಿದೆ. ಅವರು ಜಡ ವಸ್ತುಗಳಿಂದ ಹಸುವಿನ ಕರುವಿನ ಪ್ರತಿಮೆಯೊಂದನ್ನು ನಿರ್ಮಿಸಿಕೊಂಡು ಅದಕ್ಕೆ ಪೂಜೆ ಸಲ್ಲಿಸತೊಡಗಿದಾಗ ಅಲ್ಲಾಹನು ಅವರು ಧರ್ಮದಿಂದ ಪಥಭ್ರಷ್ಟರಾದರೆಂದೂ, ಅವರು ಮಾಡುತ್ತಿರುವ ಪ್ರವರ್ತನೆಗಳೆಲ್ಲವೂ ವ್ಯರ್ಥವೆಂದು ಘಂಟಾಘೋಷವಾಗಿ ಸಾರಿ ಬಿಟ್ಟನು.

ಅಲ್ಲಾಹು ಹೇಳುತ್ತಾನೆ,

وَاتَّخَذَ قَوْمُ مُوسٰى مِنْ بَعْدِهٖ مِنْ حُلِيِّهِمْ عِجْلاً جَسَدًا لَّهٗ خُوَارٌ اَلَمْ يَرَوْا اَنَّهٗ لاَ يُكَلِّمُهُمْ وَلاَ يَهْدِيهِمْ سَبِيلًا اِتَّخَذُوهُ وَكَانُوا ظٰلِمِينَ • (سورة الاعراف، الآية ١٤٨)

**"ಮೂಸರ ಅನುಪಸ್ಥಿತಿಯಲ್ಲಿ ಅವರ ಜನಾಂಗದವರು ತಮ್ಮ ಆಭರಣಗಳಿಂದ ಒಂದು ಹಸುವಿನ ವಿಗ್ರಹವನ್ನು ತಯಾರಿಸಿದರು. ಅದರಿಂದ ಎತ್ತಿನ ಸ್ವರವು ಹೊರಡುತ್ತಿತ್ತು. ಅದು ಅವರೊಂದಿಗೆ ಮಾತಾಡುವುದಿಲ್ಲವೆಂಬುದೂ ಯಾವ ವಿಷಯದಲ್ಲೂ ಮಾರ್ಗದರ್ಶನ ಮಾಡುವುದಿಲ್ಲವೆಂಬುದೂ ಅವರಿಗೆ ಕಾಣದಾಯಿತೇ? ಆದರೂ ಅವರು ಅದನ್ನು ಆರಾಧ್ಯವನ್ನಾಗಿ ಮಾಡಿಕೊಂಡರು ಮತ್ತು ಅವರು ಮಹಾ ಅಕ್ರಮಿಗಳಾಗಿದ್ದರು"**(7/148)

ಈ ಹಿಂದೆ ಉಲ್ಲೇಖಿಸಲಾದ ವಚನದಲ್ಲಿ ಪರಿಶುದ್ಧನಾದ ಅಲ್ಲಾಹನು ನಮಗೆ ತಿಳಿಸಿಕೊಡುವ ವಿಷಯವೇನೆಂದರೆ, ಆರಾಧನೆಗೆ ಅರ್ಹರಾದವರು ಮಾತಾಡಲು, ಆಲಿಸಲು, ನೋಡಲು, ಮಾರ್ಗದರ್ಶನ ನೀಡಲು ಶಕ್ತನಾಗಿರಬೇಕು. ಸರ್ವಶಕ್ತಿ-ಸಾಮರ್ಥ್ಯವು ಅವನಲ್ಲಿರಬೇಕು ಮತ್ತು ಸರ್ವ ವಿಷಯಗಳ ಜ್ಞಾನವು ಅವನಿಗಿರಬೇಕು.

ಆದರೆ, ಭೌತಿಕ ವಸ್ತುಗಳನ್ನು ಉಪಯೋಗಿಸಿಕೊಂಡು ನಿರ್ಮಿಸಲಾದ ಪ್ರತಿಮೆಯನ್ನು ಪೂಜಿಸುವುದು ಬುದ್ಧಿಗೇಡಿತನದ ಲಕ್ಷಣವಾಗಿದೆ. ಆ ಜಡ ಮೂರ್ತಿಗಳಾದರೂ ತನ್ನನ್ನು ಕರೆದು ಪ್ರಾರ್ಥಿಸುವವರ ಪ್ರಾರ್ಥನೆಗಳನ್ನು ಆಲಿಸಲಾರದು, ಅದಕ್ಕೆ ಉತ್ತರಿಸಲಾರದು, ಅದಕ್ಕೆ ಮಾತೇ ಬಾರದು, ತನ್ನನ್ನು ಪೂಜಿಸುವವರಿಗೆ ಲಾಭವನ್ನೊ-ನಷ್ಟವನ್ನೊ ಅದು ಉಂಟು ಮಾಡಲಾರದು. ಅಲ್ಲಾಹನನ್ನು ತೊರೆದು ಇಂತಹಾ ಜಡವಸ್ತುಗಳ ಆರಾಧನೆ ಮಾಡುವುದಾದರೂ ಹೇಗೆ ?

ಇನ್ನೊಂದು ವಚನದಲ್ಲಿ ಸರ್ವಶಕ್ತನಾದ ಅಲ್ಲಾಹನೇ ಹೇಳುತ್ತಾನೆ

اَفَلاَ يَـرَوْنَ اَلَّا يَـرْجِـعُ اِلَيْهِـمْ قَـوْلًا وَلاَيَمْلِكُ لَهُمْ ضَـرًّاوَّلاَ نَفْعًا(سورةطه، الآية٨٩)

**"ಅದು ಅವರ ಮಾತಿಗೆ ಉತ್ತರಿಸುವುದಿಲ್ಲ ಎಂಬುದನ್ನಾಗಲಿ, ಅವರ ಲಾಭ ನಷ್ಟಗಳ ಯಾವ ಅಧಿಕಾರವನ್ನೂ ಪಡೆದಿಲ್ಲ ಎಂಬುದನ್ನಾಗಲಿ ಅವರು ನೋಡುತ್ತಿರಲಿಲ್ಲವೇ?"** (20-89)

ಇಲ್ಲಿ ವ್ಯಕ್ತವಾಗುವುದೇನೆಂದರೆ, ಪ್ರತಿಮೆಗಳು ಅದನ್ನು ಆರಾಧಿಸುವವರ ಪ್ರಾರ್ಥನೆಗೆ ಉತ್ತರಿಸುವುದಿಲ್ಲ ಅರಬಿ ಭಾಷೆಯಲ್ಲಿ يَـرْجِـعُ ಎಂಬ ಪದದ ಅರ್ಥ يَـرُدُّ ಅಥವಾ ಉತ್ತರಿಸುವವನು ಎಂದಾಗಿದೆ ಅದೇ ಪ್ರಕಾರ رَجَعَكَ اللّٰهُ ، رَدَّكَ اللّٰهُ ಎಂಬ ಪದಗಳ ಅರ್ಥವೂ ಅಲ್ಲಾಹನು ನಿನಗೆ ಉತ್ತರಿಸಿದ ಎಂದಾಗುತ್ತದೆ. ಈ ವಚನದಲ್ಲಿ ಕೂಡಾ لاَ يَرْجِعُ ಎಂಬ ಪದ ಉಪಯೋಗಿಸಲ್ಪಟ್ಟಿದೆ.

ಇದರ ತಿರುಳೇನೆಂದರೆ ಮೂರ್ತಿ ಅಥವಾ ವಿಗ್ರಹಗಳು ಯಾರಿಗೂ ಉತ್ತರ ನೀಡುವುದಿಲ್ಲ. ಯಾರು ಅದರೊಂದಿಗೆ ಮಾತನಾಡಿದರೂ-ಪ್ರಾರ್ಥಿಸಿದರೂ, ಹೃದಯವೇ ಒಡೆದು ಹೋಗುವಂತೆ ವಿಲಾಪಿಸಿದರೂ ಅದು ಸ್ಪಂಧಿಸಲಾರದು. ಯಾವುದೇ ಪ್ರಮಾಣದ ಲಾಭವೊ ನಷ್ಟವೊ ಉಂಟು ಮಾಡುವ ಶಕ್ತಿ ಅದಕ್ಕೆ ಇರುವುದಿಲ್ಲ. ಬುದ್ಧಿ ಇರುವವರು ಯಾರೂ ಈ ನಿಷ್ಪ್ರಯೋಜಕ ವಸ್ತುವನ್ನು ಹೇಗೆ ಆರಾಧಿಸುತ್ತಾರೆ?

ಈ ರೀತಿಯ ಪದಗಳು, ವಾಕ್ಯಗಳು ಅಲ್ಲಾಹನ ಗ್ರಂಥದಲ್ಲಿ ಹಲವಾರು ಕಡೆ ಕಂಡು ಬರುತ್ತದೆ. ಪರಿಶುದ್ಧನಾದ ಅಲ್ಲಾಹನು ತನ್ನ ದಾಸರನ್ನು ಎಚ್ಚರಿಸುತ್ತಾ ಪರಿಪೂರ್ಣನಾದ, ಸರ್ವಶಕ್ತಿ ಸಂಪನ್ನನಾದ ನಾನೇ ಸರ್ವ ರೀತಿಯ ಆರಾಧನೆಗೆ ಅರ್ಹನಾಗಿರುವವನೆಂದೂ, ಸರ್ವ ಚರಾಚರವಸ್ತುಗಳ ಒಡೆಯನು ನಾನಾಗಿದ್ದು ಸರ್ವ ವಸ್ತುವಿನ ಮೇಲೆ ನನಗೆ ನಿಯಂತ್ರಣವಿರುವುದೆಂದೂ ಘೋಷಿಸುತ್ತಾನೆ. ಕರೆದು ಪ್ರಾರ್ಥಿಸುವವರ ಪ್ರಾರ್ಥನೆಗಳನ್ನು ಆಲಿಸುವ, ಅದಕ್ಕೆ ಉತ್ತರಿಸುವ, ಅವರ ಬೇಕು ಬೇಡಗಳನ್ನು ಪೂರೈಸುವ, ಲಾಭ-ನಷ್ಟಗಳನ್ನು ಉಂಟು ಮಾಡುವ ಶಕ್ತಿ ಸಾಮರ್ಥ್ಯಗಳಿರುವ ಏಕೈಕ ಆರಾಧ್ಯನು ನಾನಾಗಿದ್ದು ನಾನು ಬಯಸಿದವರಿಗೆ ಸನ್ಮಾರ್ಗವನ್ನು ಕರುಣಿಸುವೆನೆಂದು ಹೇಳುತ್ತಾನೆ.

**ಪ್ರವಾದಿ ಮುಹಮ್ಮದ್(ಸ)ರವರ ಸಂದೇಶವೇ ಪರಿಪೂರ್ಣ ಸಂದೇಶವಾಗಿದೆ :**

ಅಲ್ಲಾಹನು ನಮ್ಮ ನೆಬಿ ಮುಹಮ್ಮದ್(ಸ)ರನ್ನು ಸರ್ವ ಸೃಷ್ಟಿಗಳಲ್ಲೂ ಶ್ರೇಷ್ಠರಾಗಿ ಮಾಡಿದ್ದಾನೆ. ಸರ್ವ ಪ್ರವಾದಿಗಳಿಗೆ ಇಮಾಮ್ ಎಂದು ಘೋಷಿಸಿದ್ದಾರೆ. ಹಿಂದಿನ ಪ್ರವಾದಿಗಳಿಗೆ ನೀಡಿದ್ದ ಸಂದೇಶಗಳನ್ನೇ ನಮ್ಮ ಪ್ರವಾದಿಗಳ ಮೇಲೂ ಅವನು ಅವತೀರ್ಣಗೊಳಿಸಿದ.

ಅಂದರೆ ಅಲ್ಲಾಹನಲ್ಲದೆ ಆರಾಧನೆಗೆ ಅರ್ಹರಾದವರು ಯಾರು ಇಲ್ಲವೆಂದು, ಆರಾಧನಾ ಕರ್ಮಗಳು ಸರ್ವ ಸಂಪೂರ್ಣವಾಗಿ ಅಲ್ಲಾಹನಿಗೆ ಸಲ್ಲತಕ್ಕದೆಂದು ಹೇಳುವ ಸಂದೇಶಗಳನ್ನು ಜನರಿಗೆ ತಲುಪಿಸುವುದು, ಅವನ ಗುಣನಾಮಗಳನ್ನು ಜನರಿಗೆ ತಿಳಿಸಿ ಕೊಡುವುದು ಮತ್ತು ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂಬ ವಿಷಯದ ಕಡೆ ಜನರನ್ನು ಆಮಂತ್ರಿಸುವುದು.

ಆ ಪ್ರಕಾರ ಪ್ರವಾದಿ ಮುಹಮ್ಮದ್(ಸ) ಸಂದೇಶವು ಒಂದು ಪರಿಪೂರ್ಣವಾದ ಸಂದೇಶವೇ ಆಗಿತ್ತು. ಪರಿಶುದ್ಧನಾದ ಅಲ್ಲಾಹನು ಹೇಳುತ್ತಾನೆ.

قُلْ يَا يُّهَاالنَّاسُ اِنِّيْ رَسُوْلُ اللّٰهِ اِلَيْكُمْ جَمِيْعًا(سورة الاعراف، الآية١٥٨)

**"ಓ ಮುಹಮ್ಮದರೇ ಹೇಳಿರಿ, "ಓ ಮಾನವರೇ ನಾನು ನಿಮ್ಮೆಲ್ಲರ ಕಡೆಗೆ ಭೂಮಿ ಆಕಾಶಗಳ ಸರ್ವಭೌಮನಾಗಿರುವ ಅಲ್ಲಾಹನ ಸಂದೇಶವಾಹಕನಾಗಿರುತ್ತೇನೆ."**

**ಅಲ್ಲಾಹನು ತನ್ನ ದಿವ್ಯ ಗ್ರಂಥವಾದ ಪರಿಶುದ್ಧ ಕುರ್‌ಆನಿನಲ್ಲಿ ತೌಹೀದ್‌ನ ಕುರಿತು ಪುರಾವೆಗಳನ್ನು ನೀಡುತ್ತಾನೆ:**

ಸರ್ವಲೋಕಗಳ ಸಂರಕ್ಷಕನಾದ ಅಲ್ಲಾಹನು ನಮ್ಮ ನಬಿ(ಸ)ರಿಗೆ ಮಹತ್ ಗ್ರಂಥವನ್ನು ನೀಡಿರುತ್ತಾನೆ. ಅದು ಸರ್ವಗ್ರಂಥಗಳಿಗಿಂತ ಶ್ರೇಷ್ಠವು ಮಹತ್ವಪೂರ್ಣವೂ ಆಗಿದೆ. ಮಾತ್ರವಲ್ಲದೆ ಅತ್ಯಧಿಕ ಪ್ರಯೋಜನಕಾರಿಯೂ ಸಾರ್ವತ್ರಿಕವೂ ಆಗಿದೆ. ಈ ಗ್ರಂಥದಲ್ಲಿ ಅಲ್ಲಾಹನು ತೌಹೀದಿನ ದೃಷ್ಟಾಂತಗಳನ್ನು ತಿಳಿಸಿಕೊಟ್ಟಿದ್ದಾನೆ.

ಅವನು ತನ್ನನ್ನು ರಬ್ಬ್(ಸಂರಕ್ಷಕ)ನೆಂದು ಮಹೋನ್ನತನೆಂದು ಸರ್ವ ವಸ್ತುಗಳ ಮೇಲೆ ನಿಯಂತ್ರಣ ಹೊಂದಿದವನೆಂದು, ಅವನು ಸರ್ವವಸ್ತುಗಳ ಒಡೆಯನೆಂದು, ಲಾಭವನ್ನು ನಷ್ಟವನ್ನು ಉಂಟು ಮಾಡುವವನೆಂದು ತಿಳಿಸುತ್ತಾ ಈ ಸಂದೇಶವನ್ನು ಪ್ರಚರಿಸುವಂತೆಯೂ ಆದೇಶಿಸಿದ್ದಾನೆ.

ಯಾರಾದರೂ ಕುರ್‌ಆನನ್ನು ಗಂಭೀರವಾಗಿ ಅಧ್ಯಯನ ನಡೆಸಿದರೆ ಅವರಿಗೆ ಈ ವಿಷಯಗಳು ಮನದಟ್ಟಾಗುವುದು.

ಅಲ್ಲಾಹನು ಹೇಳುತ್ತಾನೆ,

وَلَئِنْ سَاَلْتَهُمْ مَنْ خَلَقَ السَّمٰوٰتِ وَالْاَرْضَ لَيَقُوْلُنَّ اللّٰهُ(سورة لقمان، الآية٢٥)

**"ಆಕಾಶಗಳನ್ನು ಭೂಮಿಯನ್ನು ಸೃಷ್ಟಿಸಿದವನು ಯಾರೆಂದು ಕೇಳಿದಾಗ ಅವರು ಅಲ್ಲಾಹನೆಂದೇ ಹೇಳುವರು"**(31-25)

ಅದೇ ಪ್ರಕಾರ ಅಲ್ಲಾಹನು ಮತ್ತೊಂದು ಕಡೆ ಈ ರೀತಿ ಹೇಳುತ್ತಾನೆ.

قُلْ مَنْ يَرْزُقُكُمْ مِنَ السَّمَآءِ وَالْاَرْضِ اَمَّنْ يَمْلِكُ السَّمْعَ وَالْاَبْصَارَ وَمَنْ يُخْرِجُ الْحَيَّ مِنَ الْمَيِّتِ وَيُخْرِجُ الْمَيِّتَ مِنَ الْحَيِّ وَمَنْ يُدَبِّرُ الْاَمْرَ فَسَيَقُوْلُوْنَ اللّٰهُ فَقُلْ اَفَلَا تَتَّقُوْنَ •(سورة يونس،الآية ٣١)

**"ಅವರೊಡನೆ ಕೇಳಿರಿ ನಿಮಗೆ ಆಕಾಶಗಳಿಂದಲೂ ಭೂಮಿಯಿಂದಲೂ ಜೀವನಾಧಾರ ನೀಡುತ್ತಿರುವವನಾರು? ಈ ಶ್ರವಣ ಮತ್ತು ದೃಕ್ಶಕ್ತಿಗಳು ಯಾರ ವಶದಲ್ಲಿವೆ? ನಿರ್ಜೀವಿಯಿಂದ ಸಜೀವಿಯನ್ನು ಸಜೀವಿಯಿಂದ ನಿರ್ಜೀವಿಯನ್ನು ಹೊರತರುವವನಾರು? ಈ ಜಗತ್ತಿನ ವ್ಯವಸ್ಥೆಯನ್ನು ಶಿಸ್ತು ಬದ್ಧನಾಗಿ ನಡೆಸುತ್ತಿರುವವನಾರು? ಅಲ್ಲಾಹ್ ಎಂದೇ ಅವರು ಹೇಳುವರು. ಹೇಳಿರಿ, ಹಾಗಿದ್ದರೂ ನೀವು (ಪರಮಾರ್ಥಕ್ಕೆ ವಿರುದ್ಧವಾಗಿ ನಡೆಯುವುದನ್ನು) ತೊರೆಯುವುದಿಲ್ಲವೇ?''**(10-31)

**ಅಲ್ಲಾಹನು ಮುಹಮ್ಮದ್(ಸ)ರಿಗೆ ತೌಹೀದೇ ರೂಬೂಬಿಯತ್ ಆಧಾರದಲ್ಲಿ ಬಹುದೇವ ವಿಶ್ವಾಸಿಗಳೊಂದಿಗೆ ಏಕಾದೇವಾರಾಧನೆಯನ್ನು ಸಮ್ಮತಿಸುವಂತೆ ಮಾಡುವ ಆದೇಶ ನೀಡಿದ್ದನು :**

ಅಲ್ಲಾಹನು ಈ ವಚನಗಳಲ್ಲಿ ಅವನ ಸಂದೇಶವಾಹಕರಾದ ಮುಹಮ್ಮದ್(ಸ)ರವರಿಗೆ ಸಂರಕ್ಷಕನ ಪ್ರವರ್ತನೆ ಮತ್ತು ಅವನ ಶಕ್ತಿ ಸಾಮರ್ಥ್ಯಗಳನ್ನು ಅಂದರೆ ಸೃಷ್ಟಿಸಿದವನು, ವ್ಯವಸ್ಥಾಪನೆಗೊಳಿಸಿದವನು ಮತ್ತು ಆಹಾರವನ್ನು(ರಿಝ್ಕ್) ನೀಡುವವನು ಅಲ್ಲಾಹನೆಂದು ಮುಶ್ರಿಕರು ಸಮ್ಮತಿಸುತ್ತಿದ್ದರು. ಅದನ್ನೇ ಆಧಾರವಾಗಿ ಮಾಡಿಕೊಂಡು ಅವರು ನಿರಾಕರಿಸುವ ಏಕದೇವಾರಾಧನೆಯ(ತೌಹೀದ್) ಕುರಿತು ಮಾತುಕತೆ ನಡೆಸಿರೆಂದು ಅಲ್ಲಾಹನು ಆಜ್ಞೆ ನೀಡುತ್ತಾನೆ ಮತ್ತು ಅವರ ಈ ದ್ವಂದ ನೀತಿಯನ್ನೇ ಅವರ ವಿರುದ್ಧ ಪ್ರಮಾಣವಾಗಿ ಅಲ್ಲಾಹನು ಉಲ್ಲೇಖಿಸುತ್ತಾನೆ.

ಈ ಸಂಗತಿಯನ್ನು ಹೀಗೆ ಅರ್ಥೈಸಿಕೊಳ್ಳಬಹುದಾಗಿದೆ.

ನೀವು ಅಲ್ಲಾಹನನ್ನೇ ನಿಮ್ಮ ಸೃಷ್ಟಿಕರ್ತನೆನ್ನುತ್ತೀರಿ, ಸಂರಕ್ಷಕನೆಂದೂ ಸಮ್ಮತಿಸುತ್ತೀರಿ. ಒಳಿತು-ಕೆಡುಕು, ಲಾಭ-ನಷ್ಟವೇನಿದ್ದರೂ ಅವನಿಂದಲೇ ಎನ್ನುವುದನ್ನೂ ನೀವು ಒಪ್ಪಿಕೊಳ್ಳುತ್ತೀರಿ. ಜಗತ್ತಿನಲ್ಲಿ ಪ್ರತಿಯೊಂದು ವಸ್ತುವನ್ನು ವ್ಯವಸ್ಥಾಪನೆಗೊಳಿಸಿದವನೂ, ಜೀವನವನ್ನೂ-ಮರಣವನ್ನು ನೀಡುವವನು-ಆಹಾರವನ್ನು ಒದಗಿಸುವವನೂ ಅವನೆಂದು ಸಮ್ಮತಿಸುವ ನೀವು ಆರಾಧನೆಯಲ್ಲಿ ಅವನೊಂದಿಗೆ ಇತರರನ್ನು ಏಕೆ ಶಾಮೀಲು(ಶಿರ್ಕ್)ಗೊಳಿಸುತ್ತೀರಿ? ಅಲ್ಲಾಹೇತರರ ಆರಾಧನೆಯನ್ನು ನೀವೇಕೆ ಸಂಪೂರ್ಣವಾಗಿ ತೊರೆಯುವುದಿಲ್ಲ?

ಅಲ್ಲಾಹನು ಹೇಳುತ್ತಾನೆ,

قُلْ لِّمَنِ الْاَرْضُ وَمَنْ فِيْهَا اِنْ كُنْتُمْ تَعْلَمُوْنَ • سَيَقُوْلُوْنَ لِلّٰهِ قُلْ اَفَلَا تَذَكَّرُوْنَ •(سورة المومنون، الآيتان ٨٤،٨٥)

**"ನೀವು ಬಲ್ಲವರಾಗಿದ್ದಾರೆ ಈ ಭೂಮಿ ಮತ್ತು ಇದರೊಳಗಿರುವುದೆಲ್ಲವೂ ಯಾರದೆಂದು ಹೇಳಿರಿ" ಎಂದು ಅವರೊಡನೆ ಕೇಳಿರಿ. ಅವರು ಖಂಡಿತವಾಗಿಯೂ 'ಅಲ್ಲಾಹನದು' ಎನ್ನುವರು ಹಾಗಾದರೆ ನೀವು ಪ್ರಜ್ಞಾವಂತರಾಗುವುದಿಲ್ಲವೇ?" ಎಂದು ಕೇಳಿರಿ"**

ಈ ಕುರಿತು ಇಂತಹಾ ಹಲವಾರು ವಚನಗಳು ಪವಿತ್ರ ಕುರ್‌ಆನಿನಲ್ಲಿ ಉಲ್ಲೇಖಗೊಂಡಿದೆ.

ಇವೆಲ್ಲವನ್ನೂ ವಿವರಿಸುವ ಉದ್ದೇಶವು ಅಲ್ಲಾಹನ ಕಡೆಯಿಂದ ಅವನ ದಾಸರಿಗೆ ಅವನ ಸಂದೇಶವಾಹಕರಾದ ಮುಹಮ್ಮದ್(ಸ)ರವರ ಮೂಲಕ ಅವನ ನಾಮ, ಗುಣ ನಾಮಗಳು ಮತ್ತು ಅವನಿಗೇ ಸೀಮಿತವಾದ ಹಕ್ಕು-ಅಧಿಕಾರಗಳ ಕುರಿತು ತಿಳಿಸಿಕೊಡುವುದಾಗಿದೆ. ಅವನ ಪರಿಪೂರ್ಣ ಜ್ಞಾನ, ಶಕ್ತಿ ಮತ್ತು ಔದಾರ್ಯಗಳು ನಮ್ಮ ಆರಾಧನೆಗಳಿಗೆ ಅವನೇ ಏಕೈಕ ಹಕ್ಕುದಾರನೆನ್ನುವುದು ತಿಳಿಸಿ ಕೊಡುತ್ತದೆ.

ಇದರೊಂದಿಗೆ ಒಳಿತೂ, ಕೆಡುಕೂ, ಲಾಭವೂ-ನಷ್ಟವೂ ಅವನಿಂದಲೇ ಎನ್ನುವುದನ್ನು ಮಾನವರಿಕೆ ಮಾಡಿಕೊಟ್ಟು ಅವನು ಪ್ರತಿಯೊಂದು ವಸ್ತುವಿನ ಮೇಲೆಯೂ ನಿಯಂತ್ರಣವಿರುವವನೆಂದೂ, ಅವನ ನಾಮ-ವಿಶೇಷಣ-ಪ್ರವರ್ತನೆಗಳಲ್ಲಿ ಅವನು ಏಕವೇವಾದ್ವಿತೀಯನೆಂದು ನಿರೂಪಿಸಿಕೊಡುವುದು ಮತ್ತು ಸರ್ವ ರೀತಿಯ ಸಹಭಾಗಿತ್ವಗಳಿಂದಲೂ ಅವನು ಪರಿಶುದ್ಧನೆಂದು ವಿಶದೀಕರಿಸುವುದೂ ಇದರಲ್ಲಿ ಅಡಕವಾಗಿದೆ.

**ಪ್ರವಾದಿ(ಸ) ನೀಡಿದ ಪ್ರಥಮ ಸಂದೇಶವು ತೌಹೀದ್‌ನ ಕುರಿತಾಗಿತ್ತು**

ಅಲ್ಲಾಹನು ಪ್ರವಾದಿ ಮುಹಮ್ಮದ್(ಸ)ರನ್ನು ತನ್ನ ಸಂದೇಶವಾಹಕರಾಗಿ ನಿಯುಕ್ತಿಗೊಳಿಸಿದ ನಂತರ ಪ್ರವಾದಿ(ಸ)ವರ್ಯರು ಜನರಿಗೆ ನೀಡಿದ ಮೊದಲ ಸಂದೇಶವು ತೌಹೀದ್(ಏಕದೇವತ್ವ)ನ ಕುರಿತಾಗಿತ್ತು. ಪೂರ್ವಪ್ರವಾದಿಗಳ ಕ್ರಮವೂ ಇದೇ ಆಗಿತ್ತು. ಅವರನ್ನು ಕುರೈಷರನ್ನುದ್ದೇಶಿಸಿ ಹೇಳಿದರು,

**يَاقَوْمِ، قُولُوا لَا اِلٰـهَ اِلَّا اللّٰهُ تُفْلِحُوا**

**"ಹೇ ನನ್ನ ಸಮುದಾಯಸ್ಥರೇ! ನೀವು لا الـه الا اللّٰه (ಆರಾಧನೆಗೆ ಅರ್ಹನಾದವನು ಅಲ್ಲಾಹಲ್ಲದೆ ಇನ್ನಾರೂ ಇಲ್ಲ)ವೆಂದು ಹೇಳಿರಿ, ನೀವು ವಿಜಯಶಾಲಿಗಳಾಗುವಿರಿ"** ಈ ರೀತಿ ಪ್ರವಾದಿ(ಸ) ಆ ಜನರ ಎದುರು ಸಂದೇಶ ಪ್ರಚಾರವನ್ನು ಪ್ರಾರಂಭಿಸಿದರು.

ಪ್ರವಾದಿ(ಸ) ಅವರೊಂದಿಗೆ ನಮಾಝ್ ನಿರ್ವಹಿಸಿರೆಂದೂ ಝಕಾತ್ ಕೊಡಿರೆಂದೂ ಹೇಳುತ್ತಾ ಸಂದೇಶ ಪ್ರಚಾರವನ್ನು ಪ್ರಾರಂಭಿಸಿದ್ದಲ್ಲ ಅಥವಾ ಅವರು ಆ ಜನರನ್ನು ಮಧ್ಯಪಾನ ತೊರೆಯಬೇಕೆಂದೂ ವ್ಯಬಿಚಾರದಿಂದ ದೂರ ಸರಿಯಬೇಕೆಂದೂ ಇನ್ನಿತರ ಕೆಡುಕುಗಳನ್ನು ತೊರೆಯಬೇಕೆಂದು ಉಪದೇಶಿಸಿದ್ದಲ್ಲ ಬದಲಾಗಿ ಪ್ರಪ್ರಥಮವಾಗಿ ಏಕದೇವತ್ವವನ್ನು ಸ್ವೀಕರಿಸಿಕೊಳ್ಳಬೇಕೆಂದು ಬೋಧಿಸಿದ್ದಾಗಿದೆ.

ಏಕೆಂದರೆ ಇದು ಧರ್ಮದ ತಳಹದಿಯಾಗಿದೆ. ತಳಹದಿ ಅಥವಾ ಬುನಾದಿ ಸರಿಯಾದ ನಂತರ ಇತರ ವಿಷಯಗಳು ಒಂದರ ನಂತರ ಒಂದಾಗಿ ಸರಿಯಾಗುತ್ತಾ ಬರುತ್ತದೆ. ಪ್ರವಾದಿ(ಸ) ಆ ಜನರ ಮಧ್ಯೆ ಸಂದೇಶ ಪ್ರಚಾರದ ಕಾರ್ಯವನ್ನು ತಳಹದಿ ಅಥವಾ ಬುಡದಿಂದಲೇ ಪ್ರಾರಂಭಿಸಿದರು. ಅಲ್ಲಾಹನು ಏಕನೆಂದೂ, ಆರಾಧನೆಗೆ ಅರ್ಹನಾದವನು ಅವನು ಏಕೈಕನೆಂದೂ ವಿಶ್ವಾಸವಿರಿಸಬೇಕೆಂದೂ ಬೋಧಿಸಿದನು. ಬಳಿಕ ಅವನ ಸಂದೇಶವಾಹಕರ ಕುರಿತು ವಿಶ್ವಾಸವಿರಿಸಬೇಕೆಂದು ಹೇಳಿದನು. ಎಲ್ಲಾ ಸಂದೇಶ ವಾಹಕರು ಬೋದಿಸಿದ ಮೂಲಭೂತ ಸಂಗತಿ ಅಲ್ಲಾಹನು ಮಾತ್ರ ಆರಾಧನೆಗೆ ಅರ್ಹನಾಗಿದ್ದು ಎಲ್ಲ ರೀತಿಯ ಆರಾಧನಾ ಕರ್ಮಗಳನ್ನೂ ಅವನಿಗೇ ಮೀಸಲಾಗಿರಿಸಬೇಕೆನ್ನುವುದಾಗಿತ್ತು. ಆದ್ದರಿಂದ ಅಲ್ಲಾಹನ ಏಕತ್ವ ಅಥವಾ ಆರಾಧನಾರ್ಹನು ಏಕೈಕನಾದ ಅಲ್ಲಾಹನೆಂದು ತಿಳಿದು ಸರ್ವ ಆರಾಧನಾ ಕರ್ಮಗಳನ್ನು ಅವನಿಗಾಗಿ ಮೀಸಲಿರಿಸುವುದು ಸರ್ವ ಮುಸಲ್ಮಾನರ ಆಧ್ಯ ಕರ್ತವ್ಯವಾಗಿದೆ. ಅದು ಅವರ ಧರ್ಮದ ಮೂಲಬೇಡಿಕೆಯಾಗಿದೆ. ಇದುವೇ ಲೋಕಕ್ಕೆ ಬಂದ ಸರ್ವ ಪ್ರವಾದಿಗಳ ಸಂದೇಶ ಪ್ರಚಾರದ ತಿರುಳಾಗಿತ್ತು. ಅವರೆಲ್ಲರ ಗುರಿಯೂ ಏಕೈಕನಾದ ಅಲ್ಲಾಹನು ಆರಾಧಿಸಲ್ಪಡಬೇಕು ಎನ್ನುವುದೇ ಆಗಿತ್ತು. ಇದು ಸರ್ವ ಸಂದೇಶವಾಹಕರ ನಿಯುಕ್ತಿಯ ಹಿಂದಿನ ಉದ್ದೇಶವೂ ಆಗಿತ್ತು.

## ಅರಬ್‌ನಲ್ಲಿ ಶಿರ್ಕ್ ಅಮ್ರ್ ಬುನುಲ್ ಹಯ್ಯಿ ಅಲ್ ಖುಝಾಯಿ ಇಂದ ಪಸರಿಸಿತು

ಪ್ರವಾದಿ (ಸ) ತನ್ನ ಸಮುದಾಯದೊಂದಿಗೆ ಹೇಳಿದರು "ಜನರೇ ನೀವು لا إله إلا الله ಹೇಳಿರಿ ಅಂದರೆ "ಅಲ್ಲಾಹನ ಹೊರತು ಅನ್ಯ ಆರಾಧ್ಯನಿಲ್ಲ"ಎಂದಾಗಿದೆ. ಆದರೆ ಜನರು ಇದನ್ನು ತಪ್ಪು ತಿಳಿದರು ಮತ್ತು ಆ ವಾಕ್ಯವು ಅವರ ಮಟ್ಟಿಗೆ ಅರೋಚಕವಾಗಿತ್ತು. ಏಕೆಂದರೆ ಅವರು ತಮ್ಮ ತಂದೆ ತಾತಂದಿರರ ಸಂಪ್ರದಾಯ ಮತ್ತು ಬಹು ದೇವ ವಿಶ್ವಾಸದಲ್ಲಿ ಸ್ಥಿರವಾಗಿದ್ದರು. "ಅಲ್ಲಾಹನಲ್ಲದೆ ಆರಾಧ್ಯನಿಲ್ಲ" ಎಂಬ ಮಾತು ಅವರ ವಿಶ್ವಾಸಕ್ಕೆ ತದ್ವಿರುದ್ಧವಾಗಿತ್ತು. ಅವರು ಶತಮಾನಗಳಿಂದಲೂ ವಿಗ್ರಹ ಆರಾಧನೆಗಳಲ್ಲಿ ತೊಡಗಿದ್ದರು. ಮಕ್ಕಾದ ಸರದಾರ ಅಮ್ರ್ ಬ್‌ನುಲ್ ಹಯ್ಯಿ ಅಲ್ ಖುಝಾಯೀ ಇವರನ್ನು ವಿಗ್ರಹರಾಧನೆಯಲ್ಲಿ ಏರ್ಪಡಿಸಿದ್ದನು. ಅವನಿಂದ ಪ್ರಾರಂಭಗೊಂಡ ವಿಗ್ರಹಾರಾಧನೆಯು ತಲತಲಾಂತರವಾಗಿ ಅರಬರಲ್ಲಿ ನೆಲೆಗೊಂಡಿತು.

ಅಮ್ರ್ ಬುನುಲ್ ಹಯ್ಯಿ ಅಲ್ ಖುಝಾಯೀ ಸಿರಿಯಾಕ್ಕೆ ಹೋದಾಗ ಅಲ್ಲಿನ ಜನರು ವಿಗ್ರಹಾರಾಧನೆಯಲ್ಲಿ ತೊಡಗಿರುವುದನ್ನು ಕಂಡನು. ಹಾಗೇ ಅಲ್ಲಿನ ಕುಫ್ಫಾರ್‌ಗಳನ್ನು ಅಂಧವಾಗಿ ಅನುಸರಿಸಿಕೊಂಡು ಇಲ್ಲಿನ ಜನರಿಗೂ ವಿಗ್ರಹಾರಾಧನೆಯಲ್ಲಿ ತೊಡಗುವಂತೆ ಅವನು ಪ್ರೇರೇಪಣೆಯನ್ನು ನೀಡಿದನು.

ಈ ಕುರಿತು ಇನ್ನೊಂದು ಪ್ರತೀತಿ ಇದೆ. ಅವನೊಂದಿಗೆ (ಅಮ್ರ್ ಬುನುಲ್ ಹಯ್ಯಿ ಅಲ್ ಖುಝಾಯೀ) ಹೇಳಲಾಯಿತು. ನೀನು ಜಿದ್ದಾಕ್ಕೆ ಹೋಗು ಅಲ್ಲಿ ನಿನಗೆ ಉತ್ತಮವಾಗಿ ರಚಿಸ್ಪಲ್ಪಟ್ಟ ವಿಗ್ರಹವು ದೊರೆಯುವುದು. ಅದನ್ನು ಪಡೆದು ಯಾರಿಗೂ ಕೊಡದೆ ಮಕ್ಕಾಕ್ಕೆ ಕೊಂಡೊಯ್ದು ಅರಬರಿಗೆ ಅದನ್ನು ಆರಾಧಿಸುವಂತೆ ಕರೆ ನೀಡು. ಆಗ ಅವರು ನಿನ್ನ ಕರೆಯನ್ನು ಸ್ವೀಕರಿಸುವರು.

ಆ ಪ್ರಕಾರ ಅವನು ವಿಗ್ರಹಗಳನ್ನು ಅಲ್ಲಿಂದ ತಂದು ಸಂಪೂರ್ಣ ಅರಬ್‌ನಲ್ಲಿ ಅದನ್ನು ಪ್ರಸರಿಸಿದನು. ಮತ್ತು ಅಲ್ಲಿನ ಜನರು ಅವುಗಳನ್ನು ಪೂಜಿಸತೊಡಗಿದರು. ವದ್ದ್, ಯಗೂಸು, ಸುವಾಅ್, ಯಊಕ್, ನಸ್ರ್ ಇದು ಆ ವಿಗ್ರಹಗಳ ಹೆಸರುಗಳಾಗಿದ್ದವು. ನೂಹ(ಅ)ರ ಜನಾಂಗವು ಕೂಡಾ ಇವುಗಳನ್ನೇ ಆರಾಧಿಸುತ್ತಿದ್ದುವು. ಅರಬ್‌ನಲ್ಲಿ ಕೊನೆಗೆ ಈ ವಿಗ್ರಹಗಳೇ ಆರಾಧ್ಯರೆಂದು ಪ್ರಖ್ಯಾತಗೊಂಡವು. ಮತ್ತು ಅಮ್ರ್ ಬುನುಲ್ ಹಯ್ಯಿ ಅಲ್ಲಾಹನ ಹೊರತು ಈ ವಿಗ್ರಹಗಳ ಆರಾಧನೆಗೆ ಕಾರಣಕರ್ತನಾದನು. ಬಳಿಕ ಜನರು ಹಲವಾರು ವಿಗ್ರಹಗಳು ಮತ್ತು ಮೂರ್ತಿಗಳನ್ನು ಒಂದೊಂದಾಗಿ ಆರಾಧ್ಯರಾಗಿ ಅಂಗೀಕರಿಸಿಕೊಂಡರು. ಹಾಗೇ ಅಲ್ಲಾಹನೊಂದಿಗೆ ಈ ವಿಗ್ರಹಗಳು ಮತ್ತು ಮೂರ್ತಿಗಳ ಆರಾಧನೆಯು ಸಂಪೂರ್ಣ ಅರಬ್‌ನಲ್ಲಿ ವ್ಯಾಪಕಗೊಂಡವು. ಜನರು ತಮ್ಮ ಅವಶ್ಯಕತೆಗಳನ್ನು ಪೂರೈಸುವುದಕ್ಕೆ ಇವುಗಳೊಂದಿಗೆ ಪ್ರಾರ್ಥಿಸ ತೊಡಗಿದರು. ಅಲ್ಲಾಹನೊಂದಿಗೆ ಇವುಗಳನ್ನೂ ಆರಾಧ್ಯರಾಗಿ ಸ್ವೀಕರಿಸಿಕೊಂಡರು. ಈ ಆರಾಧ್ಯರ ಸಾಮೀಪ್ಯವನ್ನು, ಸಂತೃಪ್ತಿಯನ್ನು ಬಯಸಿ ವಿವಿಧ ಆಚಾರ-ವಿಚಾರಗಳನ್ನು ಅವರು ಅಳವಡಿಸಿಕೊಂಡರು. ಮೃಗ ಬಲಿ ನೀಡುವುದು, ಹರಕೆ ಹೊರುವುದು, ಪ್ರಾರ್ಥಿಸುವುದು ಮತ್ತು ಅವುಗಳನ್ನು ಸ್ಪರ್ಶಿಸಿ ಚುಂಬಿಸುವುದು ಇತ್ಯಾದಿ. ಈ ವಿಗ್ರಹಗಳ ಪೈಕಿ 'ಉಝ್ಝಾ' ಹೆಸರಿನ ವಿಗ್ರಹವು ಮಕ್ಕಾದವರದ್ದಾಗಿತ್ತು ಮತ್ತು 'ಮನಾತ' ಎಂಬ ಹೆಸರಿನ ವಿಗ್ರಹವು ಮದೀನ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದವರದ್ದಾಗಿತ್ತು. 'ಲಾತಾ' ಎಂಬ ಹೆಸರಿನ ವಿಗ್ರಹವು 'ತ್ವಾಇಫ್' ಮತ್ತು ಅದರ ಸುತ್ತಮುತ್ತಲಿನ ಪ್ರದೇಶದವರದ್ದಾಗಿತ್ತು. ಇವುಗಳಿಗೆ ಹೊರತಾಗಿ ಇನ್ನೂ ಹಲವಾರು ವಿಗ್ರಹಗಳು ಅರಬ್‌ನಲ್ಲಿ ಕಂಡು ಬರುತ್ತಿತ್ತು.

**ಮುಶ್ರಿಕರು 'ತೌಹೀದ್' ಅಥವಾ ಏಕದೇವ ಪರಿಕಲ್ಪನೆಯನ್ನು ನಿರಾಕರಿಸಿದರು ಮತ್ತು ಆ ಕುರಿತು ದಿಗಿಲುಗೊಂಡರು :**

ಪ್ರವಾದಿ ಮುಹಮ್ಮದ್(ಸ)ರು ತನ್ನ ಸಮುದಾಯಕ್ಕೆ ತೌಹೀದ್ ಅಥವಾ ಏಕದೇವತ್ವದ ಸಂದೇಶವನ್ನು ನೀಡಿದರು. ಅಲ್ಲಾಹೇತರ ಆರಾಧ್ಯರನ್ನೆಲ್ಲ ತೊರೆಯಬೇಕೆಂದು ಸೂಚಿಸಿದರು ಆಗ ಅವರು ಆ ಸಂದೇಶವನ್ನು ನಿರಾಕರಿಸಿದ್ದು ಮಾತ್ರವಲ್ಲದೆ ಪ್ರವಾದಿಗಳನ್ನು ಧಿಕ್ಕರಿಸಿದರು ಮತ್ತು ಹೇಳಿದರು,

اَجَعَلَ الْاٰلِهَةَ اِلٰهًا وَّاحِدًا اِنَّ هٰذَا لَشَیْءٌ عُجَابٌ (سورة ص، الآية ٥)

**"ಇವನು ಎಲ್ಲ ದೇವರುಗಳ ಸ್ಥಾನದಲ್ಲಿ ಕೇವಲ ಒಬ್ಬನೇ ದೇವನನ್ನು ಮಾಡಿಬಿಟ್ಟನೇ? ನಿಜಕ್ಕೂ ಇದೊಂದು ವಿಚಿತ್ರ ಸಂಗತಿಯೆಂದು ಹೇಳತೊಡಗಿದರು."**

ಅಲ್ಲಾಹನು ಈ ಜನರ ಕುರಿತು,

اِنَّهُمْ كَانُوْا اِذَا قِیْلَ لَهُمْ لَا اِلٰهَ اِلَّا اللّٰهُ یَسْتَكْبِرُوْنَ • وَیَقُوْلُوْنَ ءَ اِنَّا لَتَارِكُوْا اٰلِهَتِنَا لِشَاعِرٍ مَّجْنُوْنٍ • (سورة الصافات، الآيتان ٣٥، ٣٦)

"ಇವರೊಡನೆ ಅಲ್ಲಾಹನ ಹೊರತು ಇನ್ನ್ಯಾರು ನೈಜ ಆರಾಧ್ಯನು ಇಲ್ಲವೆಂದು ಹೇಳಿದಾಗ ಇವರು ದರ್ಪ ತೋರುತ್ತಿದ್ದರು. ಮತ್ತು ನಾವು ಒಬ್ಬ ಮತಿಭ್ರಾಂತ ಕವಿಗಾಗಿ ನಮ್ಮ ಆರಾಧ್ಯರನ್ನು ಬಿಟ್ಟುಬಿಡಬೇಕೇ ಎನ್ನುತ್ತಿದ್ದರು."

**ಮುಶ್ರಿಕರ ಕಡೆಯಿಂದ ಏಕದೇವ ವಿಶ್ವಾಸಿಗಳಿಗೆ ಚಿತ್ರಹಿಂಸೆ :**

ಹೇ ನನ್ನ ಸಹೋದರರರೇ! ಸ್ವಲ್ಪ ಆಲೋಚಿಸಿ ನೋಡಿರಿ, ಇವರ ಮೇಲೆ ಅಜ್ಞಾನವು ಎಷ್ಟೊಂದು ಆಳವಾದ ಪ್ರಭಾವವನ್ನು ಬೀರಿತ್ತು.! ಇವರು ಅಲ್ಲಾಹು ಏಕನು. ಅವನ ಹೊರತು ಅನ್ಯ ಆರಾಧ್ಯರಿಲ್ಲ ಎನ್ನುವ ಸಂದೇಶವನ್ನು ವಿಚಿತ್ರ ದೃಷ್ಟಿಯಿಂದ ನೋಡಿದರು. ಅದರ ವಿರುದ್ಧ ದರ್ಪವನ್ನು ಪ್ರದರ್ಶಿಸಿದರು. ಅವರ ಮಟ್ಟಿಗೆ ದಿಗಿಲು ಹುಟ್ಟಿಸುವ ಈ ಸಂದೇಶವನ್ನು ನೀಡುವವರನ್ನೆಲ್ಲ ಅವರು ಶತ್ರುಗಳಾಗಿ ಪರಿಗಣಿಸಿದರು. ಅವರನ್ನು ಹತ್ಯೆಗೈಯುತ್ತಲೂ ಇದ್ದರು.

## ಮುಶ್ರಿಕರಿಂದ ಪ್ರವಾದಿ(ಸ)ರನ್ನು ಹತ್ಯೆಗೈಯ್ಯುವ ತೀರ್ಮಾಣ ಮತ್ತು ಮದೀನಕ್ಕೆ ಪ್ರವಾದಿ(ಸ)ರವರ ಹಿಜಿರಾ :

ಕಟ್ಟ ಕಡೆಗೆ ಮುಶ್ರಿಕರು ಪ್ರವಾದಿ(ಸ)ರನ್ನು ಹತ್ಯೆಗೈಯ್ಯುವ ಕುರಿತು ಒಮ್ಮತದ ತೀರ್ಮಾನ ಕೈಗೊಂಡೇ ಬಿಟ್ಟರು. ಆದರೆ ಸರ್ವಶಕ್ತನಾದ ಅಲ್ಲಾಹನು ಮುಶ್ರಿಕರ ಷಡ್ಯಂತ್ರದಿಂದ ಪ್ರವಾದಿ(ಸ)ರನ್ನು ರಕ್ಷಿಸಿದನು. ಅವರು ಮುಶ್ರಿಕರ ನಡುವಿನಿಂದ ಹೊರಟು ಮದೀನದ ಕಡೆ ಹಿಜಿರ ಹೊರಟರು. ಬಳಿಕ **بَـــدَر، أُحَـــد، اَحزاب** (ಬದ್‌ರ್, ಉಹುದು, ಅಹ್‌ಝೂಬ್)ನ ದಿನದಲ್ಲಿ ಕೂಡಾ ಪ್ರವಾದಿ(ಸ)ರವರ ಸಂದೇಶವನ್ನು ಬೇರು ಸಮೇತ ಕಿತ್ತು ಹಾಕಲು ಪ್ರಯತ್ನಿಸಿದರು. ಆದರೆ ಇಲ್ಲಿ ಕೂಡಾ ಅವರು ಪರಾಜಿತರಾದರು.

ಈ ನಡುವೆ ಅವರು 'ಉಹುದ್'ನ ದಿನದಲ್ಲಿ ತಮ್ಮ ಉದ್ದೇಶ ಸಾಧನೆಗೆ ತೀವ್ರ ಪ್ರಯತ್ನ ನಡೆಸಿದರು. ಆದರೆ ಅವರ ಈ ಷಡ್ಯಂತ್ರಗಳನ್ನು ವಿಫಲಗೊಳಿಸಲು ಅಲ್ಲಾಹು ಪರ್ಯಾಪ್ತನಷ್ಟೆ. ಅಹ್‌ಝೂಬ್‌ನಲ್ಲಿ ಮತ್ತೆ ಅವರು ಅಲ್ಲಾಹನ ಸತ್ಯಧರ್ಮವನ್ನು ಅಳಿಸುವ, ಪ್ರವಾದಿ(ಸ) ಮತ್ತು ಸಹಾಬಿಗಳನ್ನು ನಿರ್ನಾಮಗೊಳಿಸಲು ಶತ ಪ್ರಯತ್ನ ನಡೆಸಿದರು. ಆದರೆ ಅಲ್ಲೂ ಅಲ್ಲಾಹನು ಅವರನ್ನು ಹಿಮ್ಮೆಟ್ಟಿಸಿ ಅವರೊಳಗೆ ಬಿರುಕುಂಟು ಮಾಡಿಬಿಟ್ಟನು. ಅವರ ಕೇಡು ಮತ್ತು ಆಪತ್ತಿನಿಂದ ಪ್ರವಾದಿ(ಸ)ರನ್ನು ಸಂರಕ್ಷಿಸಿದನು. ಅವರನ್ನು ಆಧರಿಸಿದನು ಮತ್ತು ಯುದ್ಧದ ಸಂದರ್ಭದಲ್ಲಿ ಶತ್ರುಗಳಿಗೆದುರಾಗಿ ಅವರಿಗೆ ಸಹಾಯ ಮಾಡಿದನು.

## ಅಲ್ಲಾಹನು ಪ್ರವಾದಿ(ಸ)ರವರ ಮರಣಕ್ಕಿಂತ ಮೊದಲು ತೌಹೀದನ್ನು (ಏಕದೇವ ಸಿದ್ಧಾಂತ) ಲೋಕದಾದ್ಯಂತ ಹರಡಿ ಬಿಟ್ಟನು :

ಅಲ್ಲಾಹನು ಪ್ರವಾದಿ(ಸ)ರವರಿಗೆ ಅವರ ಮರಣಕ್ಕಿಂತ ಮೊದಲು ಸಂಪೂರ್ಣ ಧರ್ಮವನ್ನು ತಲುಪಿಸಿಕೊಟ್ಟು ಅವರಿಗೆ ಸಹಾಯ ಮಾಡಿದನು. ಸತ್ಯವನ್ನು ಅಜೇಯಗೊಳಿಸಿದನು. ಲೋಕದಾದ್ಯಂತ ಏಕದೇವ ಸಿದ್ಧಾಂತವನ್ನು ಪ್ರಚರಿಸಿದನು. ಪ್ರತಿಮೆಗಳನ್ನೂ ವಿಗ್ರಹಗಳನ್ನೂ ನಿರ್ನಾಮ ಮಾಡಿದನು. ಆ ಪ್ರಕಾರ ಪ್ರವಾದಿ(ಸ)ರವರನ್ನು ಸಂತುಷ್ಟಿಗೊಳಿಸಿದನು.

**ಮಕ್ಕಾ ವಿಜಯ ನಂತರ ಜನರು ಗುಂಪು-ಗುಂಪುಗಳಾಗಿ ಇಸ್ಲಾಮಿನಲ್ಲಿ ಪ್ರವೇಶಿಸಿದರು :**

ಹಿಜಿರ 8 ರಮದಾನ್‌ನಲ್ಲಿ ಮಕ್ಕಾ ಮುಕರ್ರಮವನ್ನು ಅಲ್ಲಾಹು ಮುಹಮ್ಮದ್(ಸ)ರವರ ವಶಕ್ಕೆ ಒಪ್ಪಿಸಿದನು. ತದ ನಂತರ ಜನರು ಗುಂಪು-ಗುಂಪುಗಳಾಗಿ ಇಸ್ಲಾಮಿನಲ್ಲಿ ಪ್ರವೇಶಿಸಿಸತೊಡಗಿದರು. ಏಕೆಂದರೆ ಒಂದನೆಯದಾಗಿ ಮಕ್ಕಾ ಅವರ ವಶವಾಯಿತು. ಎರಡನೆಯದಾಗಿ ಕುರೈಷರು ಕೂಡಾ ಮುಸ್ಲಿಮರಾಗಿ ಬಿಟ್ಟರು. ಹಾಗೆ ಸಂಪೂರ್ಣ ಅರಬರು ಒಂದರ ನಂತರ ಒಂದರಂತೆ ಅಲ್ಲಾಹನ ಧರ್ಮದಲ್ಲಿ ಪ್ರವೇಶಿಸ ತೊಡಗಿದರು. ಮತ್ತು ಪ್ರವಾದಿ(ಸ)ರವರ ಸಂದೇಶವನ್ನು ಸ್ವೀಕರಿಸಿತೊಡಗಿದರು. ಅಂದರೆ ಆರಾಧನೆಗೆ ಅರ್ಹನಾದವನು ಅಲ್ಲಾಹನಲ್ಲದೆ ಅನ್ಯರಿಲ್ಲವೆಂದೂ ಅವನು ಏಕೈಕನೆಂದು ತಿಳಿದು ಸರ್ವ ಸಂಪೂರ್ಣವಾಗಿ ಆತ್ಮಾರ್ಥವಾಗಿ ಅವನನ್ನೇ ಆರಾಧಿಸಬೇಕೆಂಬ ಸಂದೇಶವನ್ನು. ನಾವು ಈ ಪ್ರಕಾರ ತಿಳಿಸಲು ಉದ್ದೇಶಿಸುವುದೇನೆಂದರೆ, ನಮ್ಮ ನೆಬಿವರ್ಯರು ಜನರಿಗೆ ನೀಡಿದ ಸಂದೇಶವನ್ನೇ ಅವರಿಗಿಂತ ಮೊದಲು ಬಂದ ಪ್ರವಾದಿಗಳಾದ ನೂಹ್(ಅ) ಮತ್ತು ಇತರ ಪ್ರವಾದಿಗಳೂ ನೀಡಿದ್ದರು ಎನ್ನುವುದಾಗಿದೆ.

ಸರ್ವ ಪ್ರವಾದಿಗಳೂ ಅಲ್ಲಾಹನು ಏಕೈಕನು ಎಂಬ ಸಂದೇಶವನ್ನೇ ನೀಡಿದ್ದರು. ಎಲ್ಲಾ ಆರಾಧನಾ ಕರ್ಮಗಳನ್ನೂ ಅವನಿಗೇ ಮೀಸಲಾಗಿರಿಸಬೇಕು ಮತ್ತು ಅಲ್ಲಾಹನಿಗೆ ಹೊರತಾಗಿ ಆರಾಧ್ಯರೆಂದು ಸಂಕಲ್ಪಿಸಲಾಗುತ್ತಿರುವ ಸರ್ವ ಮಿಥ್ಯ ಆರಾಧ್ಯರ ಆರಾಧನೆಯನ್ನೂ ತೊರೆಯಬೇಕು ಎನ್ನುವುದಾಗಿದೆ.

ಪ್ರವಾದಿ ಮುಹಮ್ಮದ್(ಸ)ರವರ ಪ್ರಪ್ರಥಮ ಸಂದೇಶವೂ ಇದೇ ಆಗಿತ್ತು ಮಾತ್ರವಲ್ಲದೆ ಅವರ ಸಂದೇಶದ ಸಾರಾಂಶವೂ-ತಿರುಳೂ ಇದೇ ಆಗಿದೆ. ಇದುವೇ ಎಲ್ಲಕ್ಕಿಂತಲೂ ಪ್ರಾಮುಖ್ಯವಾದುದೂ ಕಡ್ಡಾಯವಾದುದೂ ಆಗಿದೆ.

ಆದಮ್(ಅ)ರಿಂದ ನೂಹ್(ಅ)ರವರ ಕಾಲದ ತನಕದ ಜನರು ತೌಹೀದ್(ಏಕದೇವತ್ವ)ನಲ್ಲಿ ಸುಸ್ಥಿರರಾಗಿದ್ದರು. ಅಂದರೆ ಅವರು ಏಕೈಕನಾದ ಅಲ್ಲಾಹನನ್ನೇ ಪರಿಪೂರ್ಣವಾಗಿ ಆರಾಧಿಸುತ್ತಿದ್ದರು. ಇದು ಅಬ್ದುಲ್ಲ ಬಿನ್ ಅಬ್ಬಾಸ್(ರ) ಮತ್ತು ಒಂದು ವಿಧ್ವಾಂಸರ ಸಮೂಹದ ನಿಲುವೇ ಆಗಿದೆ.

**ಶಿರ್ಕ್‌ನ ಪ್ರಾರಂಭವು ನೂಹ್(ಅ)ರವರ ಸಮುದಾಯದಿಂದಾಗಿದೆ :**

ನೂಹ್(ಅ)ರವರ ಸಮುದಾಯದಲ್ಲಿ ಹುಟ್ಟಿ ಬಂದ ಈ ಬಹುದೇವಾರಾಧನೆಯ ಸಂಪ್ರದಾಯದಿಂದ ಆಕರ್ಶಿತರಾದ ಜನರು ತೌಹೀದ್‌ನಲ್ಲಿ ವಿವಿಧ ಅರ್ಥ ವ್ಯಾಖ್ಯಾನಗಳನ್ನು ಕಂಡುಕೊಂಡು ಅದರಿಂದ ಬೇರ್ಪಡಲಾರಂಭಿಸಿದಾಗ ಅಲ್ಲಾಹನು ಪ್ರವಾದಿಗಳನ್ನು ಕಲುಹಿಸಿದನು. ಅಲ್ಲಾಹನು ಹೇಳುತ್ತಾನೆ,

كَانَ النَّاسُ أُمَّةً وَّاحِدَةً فَبَعَثَ اللّٰهُ النَّبِيّٖنَ مُبَشِّرِيْنَ وَمُنْذِرِيْنَ(سورة البقرة، الآية٢١٣)

**“ವಾಸ್ತವದಲ್ಲಿ ಮನುಷ್ಯರು ಒಂದೇ ಸಮೂಹವಾಗಿದ್ದರು ಅಲ್ಲಾಹನು ಪ್ರವಾದಿಗಳನ್ನು ಜನರಿಗೆ ಸುವಾರ್ತೆಯನ್ನೂ ಎಚ್ಚರಿಕೆಯನ್ನೂ ನೀಡಲಿಕ್ಕಾಗಿ ಕಳುಹಿಸಿದನು”**

## ಮನುಷ್ಯರೆಲ್ಲರೂ ಒಂದೇ ಸಮೂಹವಾಗಿದ್ದರು. ಎಲ್ಲರೂ ತೌಹೀದ್‌ನಲ್ಲೇ ಸುಸ್ಥಿರವಾಗಿದ್ದರು. ಕಾಲ ಸರಿದಂತೆ ಅವರಲ್ಲಿ ಭಿನ್ನತೆ ಏರ್ಪಟ್ಟಿತು :

ಈ ವಚನದ ತಾತ್ಪರ್ಯವೇನೆಂದರೆ, ಜನರು ತೌಹೀದ್‌ನಲ್ಲಿ-ಏಕದೇವರಾಧನೆಯಲ್ಲಿ ಸ್ಥಿರವಾಗಿದ್ದಾಗ ಅವರೆಲ್ಲರೂ ಒಂದೇ ಸಮೂಹವಾಗಿದ್ದರು. ಯಾವಾಗ ಅವರಲ್ಲಿ ಬಹುದೇವ ವಿಶ್ವಾಸ ಟಿಸಿಲೊಡೆಯಿತೊ ಅಂದು ಅವರಲ್ಲಿ ಭಿನ್ನತೆ ಉಂಟಾಯಿತು. ಅಲ್ಲಾಹನು ಇನ್ನೊಂದು ವಚನದಲ್ಲಿ ಇದನ್ನು ದೃಢೀಕರಿಸುತ್ತಾನೆ,

وَمَا كَانَ النَّاسُ اِلَّا اُمَّةً وَّاحِدَةً فَاخْتَلَفُوْا (سورة يونس، الآية١٩)

**“ಮತ್ತು ಸರ್ವ ಮಾನವರೂ ಒಂದೇ ಸಮುದಾಯವಾಗಿದ್ದರು. ಬಳಿಕ ಅವರು ಭಿನ್ನತೆ ಸೃಷ್ಟಿಸಿಕೊಂಡರು”**

ಈ ವಚನದ ತಾತ್ಪರ್ಯವೇನೆಂದರೆ, ಮನುಷ್ಯರೆಲ್ಲರೂ ತೌಹೀದ್ ಮತ್ತು ಈಮಾನ್‌ನಲ್ಲಿ ಸ್ಥಿರವಾಗಿದ್ದರು ಬಳಿಕ ಶೈತಾನನ ಪ್ರಭಾವದಿಂದ ಜನರು ವದ್ದ್, ಸುವಾಅ, ಯಗೂಸು ಯಹೂಕ್‌ನ ಕಡೆಗೆ ಶ್ರದ್ಧೆಯನ್ನೂ ಭಕ್ತಿಯನ್ನೂ ಹರಿಸತೊಡಗಿದರು. ಇದರಿಂದ ಅವರ ಮಧ್ಯೆ ಭಿನ್ನತೆ ಏರ್ಪಟ್ಟಿತು.

ನೂಹ್(ಅ)ರವರ ಜನಾಂಗವು ಅವರ ಪೂರ್ವಿಕರಾದ ಸಜ್ಜನ ಮಹಾಶಯರನ್ನು ಮೇರೆ ಮೀರಿ ಗೌರವಿಸಲೂ-ಆಧರಿಸಲೂ ತೊಡಗಿದಾಗ ಶೈತಾನನು ಅವರಿಗೆ ಅಲ್ಲಾಹನನ್ನು ಬಿಟ್ಟು ಆ ಸಜ್ಜನ ಮಹಾಶಯರನ್ನು ಆರಾಧಿಸುವುದನ್ನು ಒಂದು ಸುಂದರವೂ ಫಲಪ್ರದವೂ ಆದ ಕಾರ್ಯವಾಗಿ ಚಿತ್ರೀಕರಿಸಿ ತೋರಿಸಿದನು. ಇದರಿಂದ ಅವರು ಶಿರ್ಕ್‌ನಲ್ಲಿ ತಲ್ಲೀನರಾಗಿ ಬಿಟ್ಟರು. ಆಗಲೇ ಅಲ್ಲಾಹನು ನೂಹ್(ಅ)ರನ್ನು ಪ್ರವಾದಿಯನ್ನಾಗಿ ಮಾಡಿ ಆ ಸಮುದಾಯಕ್ಕೆ ನಿಯೋಜಿಸಿದನು. ಅವರು ಅವರ ಜನಾಂಗವನ್ನು ಏಕೈಕನಾದ ಅಲ್ಲಾಹನ ಆರಾಧನೆಯ ಕಡೆಗೆ ಆಹ್ವಾನಿಸಿದರು.

## ಭೂಮಿಯಲ್ಲಿ ‘ಶಿರ್ಕ್’ ಮೊಳಕೆಯೊಡೆದ ಮೇಲೆ, ನಿಯೋಜಿತರಾದ ಪ್ರಥಮ ಸಂದೇಶವಾಹಕ ನೂಹ್(ಅ) ಆಗಿದ್ದಾರೆ :

ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುವ ಪರಿಪಾಠ ಈ ಭೂಮಿಯಲ್ಲಿ ಕಂಡು ಬಂದಾಗ ಜನರ ಮಾರ್ಗದರ್ಶನಕ್ಕಾಗಿ ಅಲ್ಲಾಹನು ನಿಯುಕ್ತಿಗೊಳಿಸಿದ ಪ್ರಥಮ ಸಂದೇಶವಾಹಕ ಹಝ್ರತ್ ನೂಹ್(ಅ) ಆಗಿರುತ್ತಾರೆ.

ಆದಮ್(ಅ) ಅಲ್ಲಾಹನಿಂದ ಲಭಿಸಿದ ಮಾರ್ಗದರ್ಶನಕ್ಕೆ (ವಹೀ) ಬದ್ಧರಾಗಿದ್ದರು. ಆದರೆ ಅವರು ಸಂದೇಶವಾಹಕರೆಂಬ ಕುರಿತು ಕೆಲವು ಹದೀಸ್‌ಗಳು ದೃಢೀಕರಣ ನೀಡುತ್ತದಾದರೂ

ಅಲ್ಲಾಹನೊಂದಿಗೆ ಸಂಭಾಷಣೆ ನಡೆಸುವ ಶ್ರೇಷ್ಟತೆ ಹೊಂದಿದ್ದರಷ್ಟೆ ಎಂದೂ ಅದು ಹೇಳುತ್ತದೆ.

ಆದರೆ ಈ ಹದೀಸ್‌ಗಳ ಸನದು ದುರ್ಬಲವಾಗಿದೆ. ಆದ್ದರಿಂದ ಅವುಗಳನ್ನು ಅವಲಂಬಸುವಂತಿಲ್ಲ. ಆದರೆ ಆದಮ್(ರ)ರವರಿಗೆ ಶರೀಅತನ್ನು ವಹೀ ಮಾಡಲಾಗಿತ್ತೆಂಬ ಕುರಿತು ಯಾವುದೇ ಸಂಶಯವಿಲ್ಲ. ಮಾತ್ರವಲ್ಲದೆ, ಅವರು ತನ್ನ ಸಂರಕ್ಷಕನಿಂದ ಲಭಿಸಿದ ಮಾರ್ಗದರ್ಶನಕ್ಕೆ ಬದ್ಧರಾಗಿದ್ದರೆನ್ನುವುದೂ ದೃಢೀಕೃತ ಸತ್ಯವಾಗಿದೆ. ಅವರ ಮಕ್ಕಳು ಕೂಡಾ ಅವರ ಶರೀಅತನ್ನು ಅನುಸರಿಸಿ ಅಲ್ಲಾಹನನ್ನು ಏಕೈಕ ಆರಾಧ್ಯನೆಂದು ತಿಳಿದು ಆರಾಧಿಸುತ್ತಾ ಎಲ್ಲಾ ರೀತಿಯ ಆರಾಧನಾ ಕರ್ಮಗಳನ್ನು ಅವನಿಗೆ ಸಮರ್ಪಿಸಿ ಜೀವಿಸುತ್ತಿದರೆನ್ನುವುದೂ ದೃಢೀಕೃತ ಸತ್ಯವಾಗಿದೆ.

ನಂತರ ಒಂದು ಅವಧಿ (ಅಲ್ಲಾಹನ ಇಚ್ಛೆಯಂತೆ) ಸರಿದು ಹೋಯಿತು. ನಂತರ ಜನರು ವದ್ದ್, ಸುವಾಅ್, ಯಗೂಸು, ಯಹೂಕು ಮತ್ತು ನಸ್ರ್ ಎಂಬವರ ಕುರಿತು ಆರಾಧ್ಯ ಭಾವನೆ ಬೆಳಸಿಕೊಂಡರು.

**ನೂಹ್(ಅ)ರವರ ಸಮುದಾಯದಲ್ಲಿ ಶಿರ್ಕ್ ಹರಡಿದ್ದು ಹೇಗೆ?**

ಇಬ್ನ್ ಅಬ್ಬಾಸ್(ರ) ಮುಂತಾದವರಿಂದ ಉದ್ಧರಿತವಾದ ಕೆಲವು ಪ್ರಸಿದ್ಧ ಕೃತಿಗಳಿವೆ. ಅದರಲ್ಲಿ ತಿಳಿದುಬರುವಂತೆ ವದ್ದ್, ಸುವಾಅ್, ಯಗೂಸು, ಯಹೂಕು ಮತ್ತು ನಸ್ರ್ ಎಂಬವರು ಒಳ್ಳೆಯ ಮನುಷ್ಯರಾಗಿದ್ದರು. ಅವರು ಮರಣಗೊಂಡ ನಂತರ ಶೈತಾನನು ಅವರ ಸಮುದಾಯಸ್ಥರಲ್ಲಿ ಮರಣ ಹೊಂದಿದ ಈ ಮಹಾತ್ಮರ ಚಿತ್ರಗಳನ್ನು ನಿರ್ಮಿಸಿ ಅವುಗಳನ್ನು ಈ ಮರಣ ಹೊಂದಿದ ಮಹಾತ್ಮರ ಹೆಸರಿನಿಂದ ಕರೆದರೆ ಅವರು ಚಿರಸ್ಥಾಯಿಗಳಾಗಿ ಉಳಿವರೆಂಬ ದಾರಣೆಯನ್ನು ಉಂಟು ಮಾಡಿದನು.

ಆ ಪ್ರಕಾರ ಜನರು ಶೈತಾನನ ಮಾತನ್ನು ಅನುಸರಿಸುತ್ತಾ ಹಾಗೇ ಮಾಡಿದರು. ಪ್ರಾರಂಭದಲ್ಲಿ ಅವರನ್ನು ಆರಾಧಿಸುತ್ತಿರಲಿಲ್ಲ ಆಧರ-ಸಂಸ್ಮರಣೆ ಎಂಬ ಹೆಸರಷ್ಟೆ ಅವರ ಈ ಪ್ರವೃತ್ತಿಗಿತ್ತು. ಈ ತಲೆಮಾರು ಗತಿಸಿತು. ಜ್ಞಾನವು ಮರೆಯಾಯಿತು ಮತ್ತು ಅಲ್ಲಾಹನ ಭಯ-ಭಕ್ತಿ ಇರುವ ವಿದ್ವಾಂಸರು ಕಡಿಮೆಯಾದರು. ಆಗ ಶೈತಾನ್ ನಂತರದ ಪೀಳಿಗೆಯ ಬಳಿ ಬಂದು ಈ ಪ್ರತಿಮೆಗಳನ್ನು, ಚಿತ್ರಗಳನ್ನು ಏಕೆ ನಿರ್ಮಿಸಲಾಗಿದೆ ಎಂದು ನೀವೇಕೆ ಆಲೋಚಿಸುವುದಿಲ್ಲ? ಅವರು ನಿಮ್ಮ ಪೂರ್ವಿಕರಿಗೆ ಲಾಭ-ನಷ್ಟಗಳನ್ನುಂಟು ಮಾಡುತ್ತಿದ್ದರು. ನಿಮ್ಮ ಪೂರ್ವಿಕರು ಅವರ ಅತ್ಯಾವಶ್ಯಕ ಸಂದರ್ಭದಲ್ಲಿ ಈ ಪ್ರತಿಮೆಗಳನ್ನು ಕರೆದು ಪ್ರಾರ್ಥಿಸುತ್ತಿದ್ದರು, ಅವರೊಂದಿಗೆ ಅವಹಾಲು ಹೇಳುತ್ತಿದ್ದರು, ಅವರೊಂದಿಗೆ ಮಳೆಗಾಗಿ ಅಭ್ಯರ್ಥನೆ ಸಲ್ಲಿಸುತ್ತಿದ್ದರು ಎನ್ನತೊಡಗಿದನು. ಇದರಿಂದ ಪ್ರೇರಿತರಾದ ಜನರು ಮುಂದೆ ಆ ಪ್ರತಿಮೆಗಳ ಮುಂದೆ ಪ್ರಾರ್ಥನೆಯನ್ನು ಪ್ರಾರಂಭಿಸುವ ಮೂಲಕ ಸು-ಸ್ಪಷ್ಟ(ಶಿರ್ಕ್) ದೇವ ಸಹಭಾಗಿತ್ವದಲ್ಲಿ ಏರ್ಪಟ್ಟರು.

ಈ ಎಲ್ಲಾ ವಿಷಯಗಳಿಂದ ಸ್ಪಷ್ಟವಾಗುವುದೇನೆಂದರೆ ಭೂಮಿಯಲ್ಲಿ ಶಿರ್ಕ್(ದೇವ ಸಹಭಾಗಿತ್ವ) ಪ್ರಾರಂಭಗೊಂಡ ನಂತರ ಪ್ರಪ್ರಥಮವಾಗಿ ನಿಯುಕ್ತಿಗೊಂಡ ಸಂದೇಶವಾಹಕ

ನೂಹ್(ಅ)ರವರಾಗಿದ್ದಾರೆ. ಅಲ್ಲಾಹು ಅವರನ್ನು ಭೂಮಿಯಲ್ಲಿ ನೆಲೆಗೊಂಡ ಜನರ ಮಾರ್ಗದರ್ಶನಕ್ಕಾಗಿ ಕಳುಹಿಸಿದನು. ಬುಖಾರಿ ಮತ್ತು ಮುಸ್ಲಿಮ್ ಮತ್ತು ಇತರ ಹದೀಸ್ ಗ್ರಂಥದಲ್ಲಿ ಉಲ್ಲೇಖವಿರುವ ಒಂದು ಉದ್ದರಣೆ ಹೀಗಿದೆ.

مِنْ اَنَّ اَهْلَ الْمَوْقِفِ يَوْمَ الْقِيَامَةِ يَقُوْلُوْنَ. يَانُوْحُ. اَنْتَ اَوَّلُ رَسُوْلٍ اَرْسَلَهُ اللّٰهُ اِلٰى اَهْلِ الْاَرْضِ فَاشْفَعْ لَنَا اِلٰى رَبِّكَ (الحديث)

**"ಕಿಯಾಮತ್‌ನ ದಿನದಂದು ಮಹಶರದಲ್ಲಿ ಜನರು ಹೇಳುವರು. ಹೇ ನೂಹ್! ಭೂಮಿಗೆ ಅಲ್ಲಾಹನು ನಿಯುಕ್ತಿಗೊಳಿಸಿದ ಪ್ರಪ್ರಥಮ ಸಂದೇಶವಾಹಕರು ನೀವಾಗಿರುವಿರಿ. ನೀವು ನಿಮ್ಮ ಸಂರಕ್ಷಕನೊಂದಿಗೆ ನಮ್ಮ ಕುರಿತು ಶಿಫಾರಸ್ಸು ಮಾಡಿರಿ"**(ಹದೀಸ್)

ಆದಮ್(ಅ) ನೆಬಿ ಆಗಿದ್ದರೆನ್ನುವುದು ಪ್ರಭಲ ಆಧಾರಗಳಿಂದ ಸ್ಥಿರಪಟ್ಟಿದೆ.

ಆದಮ್(ಅ)ರವರಿಗೆ ನೂಹ್(ಅ)ರವರಿಗಿಂತ ಮೊದಲು ನುಬುವ್ವತ್ (ಪ್ರವಾದಿತ್ವ) ನೀಡಲಾಗಿತ್ತೆನ್ನುವುದು ದೃಢೀಕೃತ ಆಧಾರಗಳಿಂದ ಸ್ಥಿರಪಡುತ್ತದೆ.

**ಪ್ರವಾದಿಗಳ ಸಂಖ್ಯೆ ಅಲ್ಲಾಹನಿಗಷ್ಟೇ ತಿಳಿದಿದೆ :**

ಹಝ್ರತ್ ಅಬೂಝರ್ (ರ)ರವರ ಹದೀಸ್‌ನಲ್ಲಿ ಈ ಕುರಿತು ಪ್ರಸ್ತಾಪವಿದೆ. ಅಬೂಹಾತಿಮ್ ಬಿನ್ ಹಿಬಾನ್ ಮೊದಲಾದವರು ಇದರ ವರದಿಗಾರರಾಗಿರುವರು. ಅವರು ಪ್ರವಾದಿ ﷺ ರವರೊಂದಿಗೆ ಅಲ್ಲಾಹನು ಭೂಮಿಗೆ ಕಳುಹಿಸಿದ ಅಂಬಿಯಾ ಮತ್ತು ರಸೂಲರ ಸಂಖ್ಯೆಯ ಕುರಿತು ವಿಚಾರಿಸಿದಾಗ ಅವರು ﷺ ಹೇಳಿದರು,

اَلْاَنْبِيَاءُ مَاةٌوَاَرْبَعَةٌ وَعِشْرُوْنَ اَلْفًا وَالرُّسُلُ ثَلَاثُ مِاَةٍ وَثَلَاثَةَ عَشَرَ،وَفِىْ رِوَايَةِ اَبِىْ اُمَامَةَ:(ثَلاَ ثَةُ مِاَةٍ وَخَمْسَةَ عَشَرَ)

**"ಅಂಬಿಯಾ ಒಂದು ಲಕ್ಷ ಇಪ್ಪತ್ತನಾಲ್ಕು ಸಾವಿರವಾಗಿರುವರು ಮತ್ತು ರಸೂಲ್ ಮುನ್ನೂರ ಹದಿಮೂರು ಆಗಿರುವರು. ಇದೇ ಪ್ರಕಾರ ಅಬೂಉಮಾಮರವರ ವರದಿಯಲ್ಲಿ ಮುನ್ನೂರ ಹದಿನೈದು ಎಂದಿದೆ."**

ಆದರೆ ಹದೀಸ್ ವಿದ್ವಾಂಸರು ಈ ಎರಡೂ ಹದೀಸ್‌ಗಳನ್ನು ದುರ್ಬಲವೆಂದು ಪರಿಗಣಿಸುತ್ತಾರೆ. ಇಂತಹ ಇನ್ನು ಕೆಲವು ವರದಿಗಳೂ ಇದೆ. ಅದು ಕೂಡಾ ದುರ್ಬಲವೇ ಆಗಿದೆ.

ಇನ್ನು ಕೆಲವು ಹದೀಸ್‌ಗಳಲ್ಲಿ ಪ್ರವಾದಿ ﷺ (اَلْفُ نَبِيٍّ فَاَكْثَرُ) ಒಂದು ಸಾವಿರ ಅಥವಾ ಅದಕ್ಕಿಂತ ಸ್ವಲ್ಪ ಹೆಚ್ಚು "ಪ್ರವಾದಿಗಳು" ಎಂದು ಹೇಳಿದ್ದಾರೆಂದು ಉಲ್ಲೇಖವಿದೆ. ಇನ್ನು ಕೆಲವು

ವರದಿಗಳಲ್ಲಿ (اِنَّ الْاَنْبِيَـاءَ ثَلَاثَةُ آلَافٍ) ಮೂರು ಸಾವಿರ ಅಂಬಿಯಾಗಳೆಂಬ ಉಲ್ಲೇಖವಿರುವುದು.

ಈ ಎಲ್ಲಾ ಹದೀಸ್‌ಗಳೂ ದುರ್ಬಲವಾಗಿದೆ. ಮಾತ್ರವಲ್ಲದೆ ಅಬೂದರ್(ರ)ರವರ ಹದೀಸನ್ನು ಇಬ್ನ್ ಜೌಝಿ ಕೃತಕ ಹದೀಸ್ ಎಂದೂ ಹೇಳಿರುವರು.

ಈ ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸುವ ಉದ್ದೇಶವೇನೆಂದರೆ ಅಂಬಿಯಾ ಮತ್ತು ರಸೂಲ್‌ಗಳ ಸಂಖ್ಯೆಯನ್ನು ನಿರ್ದಿಷ್ಟವಾಗಿ ಹೇಳುವಂತಹಾ ಒಂದೇ ಒಂದು ಪ್ರಬಲ ಹದೀಸ್ ಇರುವುದಿಲ್ಲ ಎಂದು ತಿಳಿಸುವುದಕ್ಕಾಗಿದೆ. ಅವರ ಸಂಖ್ಯೆಯ ಅರಿವು ಸರ್ವಶಕ್ತನಾದ ಅಲ್ಲಾಹನಿಗಲ್ಲದೆ ಇನ್ನಾರೂ ಅರಿತಿರುವುದಿಲ್ಲ.

ಆದರೆ ಪ್ರವಾದಿಗಳ ಒಂದು ಸಮೂಹವೇ ಇದೆ. ಆ ಪೈಕಿ ಹಲವು ಪ್ರವಾದಿಗಳ ಹೆಸರು ಮತ್ತು ವಿವರವನ್ನು ಅಲ್ಲಾಹು ನಿಮಗೆ ನೀಡಿದ್ದಾನೆ. ಅದೇ ಪ್ರಕಾರ ಇನ್ನು ಹಲವರ ಕುರಿತು ನಮಗೆ ತಿಳಿಸಿಕೊಡಲಾಗಿಲ್ಲ.

## ಉಪಯುಕ್ತವಾದ ವಿಷಯವನ್ನು ನಾವು ಕಲಿತುಕೊಳ್ಳೋಣ

ಅತ್ಯಾವಶ್ಯಕವಾದ ಕೆಲವು ಸಂಗತಿಗಳನ್ನು ನಾವು ಕಲಿತುಕೊಳ್ಳಬೇಕು. ಅದೇನೆಂದರೆ, ಎಲ್ಲಾ ಕಾಲಘಟ್ಟಗಳಲ್ಲೂ ಪ್ರಪಂಚದ ವಿವಿಧ ಪ್ರದೇಶಗಳಲ್ಲಿ ಆಗತರಾದ ಪ್ರವಾದಿಗಳೆಲ್ಲರೂ ಏಕೈಕನಾದ ಅಲ್ಲಾಹನನ್ನು ಮಾತ್ರ ಆರಾಧ್ಯನಾಗಿ ಸ್ವೀಕರಿಸಿಕೊಳ್ಳಬೇಕೆಂದೂ ಎಲ್ಲಾ ರೀತಿಯ ಆರಾಧನಾ ಕರ್ಮಗಳನ್ನು ಕೇವಲ ಅವನೊಬ್ಬನಿಗೇ ಮೀಸಲಾಗಿರಿಸಬೇಕೆಂದೂ ಬೋಧಿಸಿದ್ದರು. ಅವರೆಲ್ಲರೂ ಅಭಿ ಸಂಬೋಧಿಸಿದ ಸಮುದಾಯಗಳನ್ನು ಅವರ ಸಂದೇಶದೆಡೆಗೆ ಆಹ್ವಾನಿಸಿದ್ದರು.

ಆ ಸಮುದಾಯಗಳ ಪೈಕಿ ಕೆಲವರು ಅವರ ಸಂದೇಶವನ್ನು ಹೃತ್ಪೂರ್ವಕವಾಗಿ ಸ್ವೀಕರಿಸಿಕೊಂಡರು ಮತ್ತು ಕೆಲವರು ಅದನ್ನು ನಿರಾಕರಿಸಿದರು. ಪ್ರವಾದಿಗಳ ಸಂದೇಶವನ್ನು ಸ್ವೀಕರಿಸಿಕೊಂಡು ಅದನ್ನು ಸಂಪೂರ್ಣವಾಗಿ ಜೀವನದಲ್ಲಿ ಅಳವಡಿಸಿಕೊಂಡು ಜೀವಿಸಿದವರ ಸಂಖ್ಯೆ ಯಾವತ್ತೂ ಕಡಿಮೆಯೇ ಆಗಿತ್ತು. ಆ ಪೈಕಿ ಇನ್ನು ಕೆಲವರು ಆ ಸಂದೇಶಗಳಿಂದ ಅವರಿಗೆ ಅನುಕೂಲವೆನಿಸಿದ್ದನ್ನು ಸ್ವೀಕರಿಸಿಕೊಂಡು ಅವರಿಗೆ ಪ್ರತಿಕೂಲವೆನಿಸಿದ್ದನ್ನು ಅವಗಣಿಸಿದರು.

ನಮ್ಮ ನೆಬಿ ಮುಹಮ್ಮದ್(ಸ) ಪ್ರವಾದಿಗಳ ಶೃಂಖಲೆಯಲ್ಲಿ ಕೊನೆಯವರೂ ಅವರೆಲ್ಲರಲ್ಲೂ ಶ್ರೇಷ್ಠರೂ ಆಗಿದ್ದಾರೆ.

ನಮ್ಮ ನೆಬಿ, ಪ್ರವಾದಿ ಮುಹಮ್ಮದ್(ಸ) ಪ್ರವಾದಿಗಳ ಸರಣಿಯಲ್ಲಿ ಕೊನೆಯವರಾಗಿದ್ದಾರೆ. ಮಾತ್ರವಲ್ಲದೆ ಸರ್ವ ಪ್ರವಾದಿಗಳಲ್ಲೂ ಅವರಿಗೆ ವಿಶಿಷ್ಟತೆ ಮತ್ತು ಶ್ರೇಷ್ಠತೆಯನ್ನು ದಯಪಾಲಿಸಲಾಗಿದೆ. ಸಂದೇಶ ಪ್ರಚಾರದ ಹಾದಿಯಲ್ಲಿ ಅವರಿಗೆ ಶತ್ರುಗಳು ನಿರಂತರ ಅಡಚಣೆ ಉಂಟು ಮಾಡಿದರು, ಅಪಮಾನಿಸಿದರು, ಕಲ್ಲು ಹೊಡೆದು ಹಿಂಸಿಸಿದರು. ಸತ್ತ ಒಂಟೆಯ ಕೊಳೆತು ನಾರುವ ಕರುಳನ್ನು ತಂದು ಅವರ ಹೆಗಲಿಗೇರಿಸಿ ಅಟ್ಟಹಾಸ ಮೆರೆದರು, ಕೊನೆಗೆ ಅವರನ್ನು

ಕೊಂದು ಬಿಡುವ ತೀರ್ಮಾಣವನ್ನೂ ಕೈಗೊಂಡರು. ಮಾತ್ರವಲ್ಲದೆ ಅವರು ತಮ್ಮ ದುಷ್ಟ ಸಂಕಲ್ಪವನ್ನು ಕಾರ್ಯಗತಗೊಳಿಸಲು ಪ್ರವಾದಿ(ಸ)ರವರ ಮನೆಯನ್ನು ಸುತ್ತುವರಿದರು. ಆದರೆ ಸರ್ವಶಕ್ತನಾದ ಅಲ್ಲಾಹನು ತನ್ನ ಮಹಿಮೆಯಿಂದ ಪ್ರವಾದಿ(ಸ)ರನ್ನು ಅವರಿಂದ ಪಾರುಗೊಳಿಸಿ ಮದೀನಕ್ಕೆ ತಲುಪಿಸಿದನು. ಮದೀನಾದಲ್ಲಿ ಕೂಡಾ ಪ್ರವಾದಿ(ಸ)ರಿಗೆ ಬಹಳ ಸಂಕಷ್ಟಗಳು ಎದುರಾದವು. ಧರ್ಮದ ಸಂರಕ್ಷಣೆಗಾಗಿ ಹಲವಾರು ಯುದ್ಧಗಳನ್ನು ಅವರು ಮಾಡಬೇಕಾಗಿ ಬಂತು. ಈ ಎಲ್ಲಾ ಸಂಕಷ್ಟ ಮತ್ತು ಸಂಘರ್ಷದ ಸಂದರ್ಭಗಳಲ್ಲಿ ಕೂಡಾ ಅಲ್ಲಾಹು ನೆರವನ್ನೂ ಸಹಾಯವನ್ನೂ ಇಳಿಸಿಕೊಟ್ಟು ಅವರನ್ನು ಶತ್ರುಗಳಿಂದ ಸಂರಕ್ಷಿಸಿದನು.

## ಎಲ್ಲಾ ಪ್ರವಾದಿಗಳ ಸಂದೇಶವೂ ಒಂದೇ ಆಗಿದೆ :

ಈ ಹಿಂದಿನ ವಿವರಣೆಗಳು ಅಲ್ಲಾಹನು ಲೋಕದಲ್ಲಿ ನಿಯುಕ್ತಿಗೊಳಿಸಿದ ಎಲ್ಲಾ ಪ್ರವಾದಿಗಳ ಸಂದೇಶವೂ ಒಂದೇ ಎನ್ನುವುದನ್ನು ದೃಢೀಕರಿಸುತ್ತದೆ. ಅದು **"ತೌಹೀದ್"** ಅಥವಾ ಏಕದೇವತ್ವದ ಸಂದೇಶವಾಗಿದೆ. ಅಂದರೆ ಆರಾಧನೆಗಳನ್ನು ಕೇವಲ ಸೃಷ್ಟಿಕರ್ತನು ಪರಿಪಾಲಕನೂ ಆದ ಅಲ್ಲಾಹನಿಗೆ ಮೀಸಲಾಗಿಸಬೇಕು ಎನ್ನುವುದಾಗಿದೆ.

ಅದರೊಂದಿಗೆ ಎಲ್ಲಾ ಪ್ರವಾದಿಗಳು ಏಕದೇವತ್ವವನ್ನು ಪ್ರತಿಪಾದಿಸುತ್ತಾ ಆರಾಧನಾ ಕರ್ಮಗಳೆಲ್ಲವನ್ನೂ ಏಕನಾದ ಅಲ್ಲಾಹನಿಗೆ ಸಮರ್ಪಿಸಬೇಕೆಂದು ಸಾರುತ್ತಾ ಅವನ ಗುಣಗಳ ಮತ್ತು ಶಕ್ತಿ ಸಾಮರ್ಥ್ಯ ಮೇಲೆ ವಿಶ್ವಾಸವಿರಿಸಬೇಕೆಂದು ಕರೆನೀಡಿದರು. ಸೃಷ್ಟಿಕಾರ್ಯದಲ್ಲಿ ಅವನು ಏಕಾಂಗಿಯಾಗಿರುತ್ತಾನೆ. ಗುಣ–ನಾಮಗಳಲ್ಲೂ ಅವನು ಉಪಮೆಗೆ ನಿಲುಕಲಾರನು. ಆರಾಧನೆಗೆ ಅತ್ಯಂತ ಅರ್ಹನಾದವನು ಅವನು ಮಾತ್ರ ಎನ್ನುವುದು ಅವರ ಸಂದೇಶದ ತಿರುಳು ಆಗಿತ್ತು.

ಆರಾಧನೆಗೆ ಅರ್ಹತೆ ಇರುವವರು ಇನ್ನೊಬ್ಬರು ಇರುವುದು ಅಸಾಧ್ಯವಾದ ಮಾತಾಗಿದೆ. ಯಾವುದೇ ಪ್ರವಾದಿಯಾಗಲಿ ದೇವಚರರಾಗಲಿ, ಸಜ್ಜನರಾದ ಮನುಷ್ಯರೇ ಆಗಿರಲಿ ಆರಾಧನೆಗೆ ಅರ್ಹರೆನಿಸುವ ಸಂಭವನೀಯತೆ ಇಲ್ಲವೇ ಇಲ್ಲ.

## ಆರಾಧನೆ ಅಲ್ಲಾಹನಿಗೆ ಸಲ್ಲಬೇಕೆನ್ನುವುದು ಅವನ ಹಕ್ಕಾಗಿದೆ:

ಅಲ್ಲಾಹು ಮನುಷ್ಯರನ್ನು ಸೃಷ್ಟಿಸಿರುವ ಉದ್ದೇಶವೇ ಇದಾಗಿದೆ. ಮಾತ್ರವಲ್ಲದೆ ಈ ಯಾತಾರ್ಥ್ಯವನ್ನು ತಿಳಿಸಿಕೊಡಲಿಕ್ಕಾಗಿಯೇ ಅವನು ಪ್ರವಾದಿಗಳನ್ನು ಕಳುಹಿಸಿದ. ಈ ಕುರಿತು ಅಲ್ಲಾಹು ಹೇಳುತ್ತಾನೆ,

وَمَاخَلَقْتُ الْجِنَّ وَالْاِنْسَ اِلَّا لِيَعْبُدُوْنِ(سورة الذاريٰت، الآية٥٦)

**"ನಾನು ಮನಷ್ಯರನ್ನು ಯಕ್ಷ (ಜಿನ್ನ್)ಗಳನ್ನು ಕೇವಲ ನನ್ನನ್ನು ಆರಾಧಿಸಲೆಂದೇ ಸೃಷ್ಟಿಸಿರುತ್ತೇನೆ"**

ಇನ್ನೊಂದು ವಚನದಲ್ಲಿ ಅಲ್ಲಾಹನು ಹೇಳುತ್ತಾನೆ,

**وَلَقَدْ بَعَثْنَا فِي كُلِّ أُمَّةٍ رَّسُولاً أَنِ اعْبُدُوا اللَّهَ وَاجْتَنِبُوا الطَّاغُوتَ• (سورة النحل، الآية ٣٦)**

**"ನಾವು ಪ್ರತಿಯೊಂದು ಸಮೂಹಕ್ಕೂ ಪ್ರವಾದಿಗಳನ್ನು ಕಳುಹಿಸಿದೆವು ಅಲ್ಲಾಹನನ್ನು ಮಾತ್ರ ಆರಾಧಿಸಿರಿ ಅಲ್ಲಾಹೇತರ ಆರಾಧ್ಯರಿಂದ ದೂರವಿರಿ"** ಎಂದು ಅವರ ಮುಖಾಂತರ ಎಚ್ಚರಿಕೆ ನೀಡಿದೆವು.

ಅಲ್ಲಾಹನನ್ನು ಆರಾಧಿಸಲು ಮತ್ತು ಅವನೋರ್ವನೆ ಆರಾಧ್ಯನೆಂದು ಅಂಗೀಕರಿಸಲೆಂದೇ ಮನುಷ್ಯನು ಸೃಷ್ಟಿಸಲ್ಪಟ್ಟನು, ಪ್ರವಾದಿಗಳು ನಿಯುಕ್ತಗೊಂಡರು ಮತ್ತು ಗ್ರಂಥಗಳು ಅವತೀರ್ಣಗೊಂಡವು.

ಅಲ್ಲಾಹು ಹೇಳುತ್ತಾನೆ,

**كِتَٰبٌ أُحْكِمَتْ آيَاتُهُ ثُمَّ فُصِّلَتْ مِن لَّدُنْ حَكِيمٍ خَبِيرٍ• أَلَّا تَعْبُدُوا إِلَّا اللَّهَ (سورة هود، الآيتان ١،٢)**

**"ಈ ಗ್ರಂಥದ ಸೂಕ್ತಗಳು ಪ್ರಬುದ್ಧ ಮತ್ತು ಕೂಲಂಕುಷವಾಗಿದ್ದು ನೀವು ಅಲ್ಲಾಹನ ಹೊರತು ಇನ್ನಾರ ಆರಾಧನೆಯನ್ನೂ ಮಾಡಬಾರದೆಂದು ಓರ್ವ ಧೀಮಂತನೂ ವಿವರ ಪೂರ್ಣನ್ನೂ ಆದವನ ಕಡೆಯಿಂದ ನಿರ್ದೇಶಿಸ್ಪಟ್ಟಿದೆ."**

ಇನ್ನೊಂದು ವಚನದಲ್ಲಿ ಅಲ್ಲಾಹನು ಹೇಳುತ್ತಾನೆ,

**هَٰذَا بَلَاغٌ لِّلنَّاسِ وَلِيُنذَرُوا بِهِ وَلِيَعْلَمُوا أَنَّمَا هُوَ إِلَٰهٌ وَاحِدٌ وَلِيَذَّكَّرَ أُولُو الْأَلْبَابِ• (سورة ابراهيم، الآية ٥٢)**

**" ಇದು ಸಕಲ ಮಾನವರಿಗೆ ಒಂದು ಸಂದೇಶ. ಇವರಿಗೆ ಇದರ ಮೂಲಕ ಎಚ್ಚರಿಕೆ ಕೊಡಲಿಕ್ಕಾಗಿಯೂ ವಾಸ್ತವದಲ್ಲಿ ದೇವನೊಬ್ಬನೇ ಎಂದು ಅವರು ತಿಳಿದುಕೊಳ್ಳಲಿಕ್ಕಾಗಿಯೂ ಬುದ್ಧಿಜೀವಿಗಳು ಎಚ್ಚರಗೊಳ್ಳಲೆಂದು ಇದು ಕಳುಹಿಸಲ್ಪಟ್ಟಿರುತ್ತದೆ."**

**ಅಲ್ಲಾಹು ಆರಾಧ್ಯನು, ಮಹಾಮಹಿಮನು ಅವನ ಹೊರತಾದ ಪ್ರತಿಯೊಂದು ವಸ್ತುವಿನ ಸೃಷ್ಟಿಕರ್ತನವನು ಎನ್ನುವುದಕ್ಕೆ ಕುರ್‌ಆನ್ ನೀಡುವ ಪ್ರಮಾಣಗಳು :**

ಪರಿಶುದ್ಧನಾದ ಅಲ್ಲಾಹನು ಅವನ ಪಾವನಗ್ರಂಥ ಕುರ್‌ಆನಿನಲ್ಲಿ ಅವನ

ಸಂಕೇತಗಳನ್ನು ಮತ್ತು ಅವನ ಸೃಷ್ಟಿಯ ವಿಶೇಷತೆಗಳನ್ನು ಉಲ್ಲೇಖಿಸಿದ್ದಾನೆ. ಅದು ಅವನ ಮಹಿಮೆ, ಅವನ ಪರಮ ಪೂಜ್ಯತೆ ಮತ್ತು ಅವನ ಕರ್ತೃತ್ವವನ್ನು ದೃಢೀಕರಿಸುತ್ತದೆ. ಅವನು ಏಕೈಕನಾದ ಆರಾಧ್ಯನೆನ್ನುವುದನ್ನು ಸಾಬೀತುಗೊಳಿಸುತ್ತದೆ.

ಅಲ್ಲಾಹನ ಗ್ರಂಥ ಮತ್ತು ಅವನ ಸೃಷ್ಟಿ ವೈಭವದ ಕುರಿತು ವಿಚಾರ ವಿಮರ್ಶೆ ನಡೆಸುವವರಿಗೆ ಅವರು ಪಠಿಸುವ ಸೂಕ್ತಿಗಳು, ಅದರಲ್ಲಿ ವ್ಯಕ್ತವಾಗುವ ದೃಷ್ಟಾಂತಗಳು ಮತ್ತು ವರದಿ ಮಾಡಲ್ಪಟ್ಟಿರುವ ವಿಷಯಗಳು ಅವನ ಸಾರ್ವಭೌಮತೆಯನ್ನು ಮನದಟ್ಟು ಮಾಡಿಕೊಡಲು ಪರ್ಯಾಪ್ತವಿರುವುದು. ಅವನು ಏಕನಾದ ಆರಾಧ್ಯನು ಎನ್ನುವ ಸತ್ಯವನ್ನು ಸಾರಲಿಕ್ಕಾಗಿ ಅವನೇ ಪ್ರವಾದಿಗಳನ್ನು ನಿಯಕ್ತಿಗೊಳಿಸಿರುವುದೆಂದೂ ಅವರೆಲ್ಲರೂ ಅದೇ ಸಂದೇಶದ ಕಡೆಗೆ ಜನರನ್ನು ಆಮಂತ್ರಿಸಿರುವುದೆಂದೂ ವ್ಯಕ್ತವಾಗುತ್ತದೆ.

ನೂಹ್(ಅ)ರವರ ಕಾಲದ ಜನತೆ ಅಲ್ಲಾಹ್‌ನೊಂದಿಗೆ ಕಲ್ಪಿಸಿದ ದೇವ ಸಹಭಾಗಿತ್ವದ ಪಳಿಯುಳಿಕೆಗಳು ಇಂದಿನ ಕಾಲದ ಜನರಲ್ಲೂ ಕಂಡುಬರುತ್ತದೆ. ವಿಗ್ರಹಗಳನ್ನು ಆರಾಧಿಸುವ, ಸಜ್ಜನರನ್ನು– ಗತ ಪ್ರವಾದಿಗಳನ್ನು ಕರೆದು ಪ್ರಾರ್ಥಿಸುವ ಜನರು ಇಂದು ಕೂಡಾ ಕಂಡುಬರುತ್ತಾರೆ. ಅವರು ಇವುಗಳನ್ನು ನೇರವಾಗಿ ಅಲ್ಲಾಹನಿಗೆ ಸಹಭಾಗಳಾಗಿ ಸಂಕಲ್ಪಿಸುತ್ತಾರೆ. ಚರಿತ್ರೆಯನ್ನು ಅವಲೋಕನ ನಡೆಸುವವರಿಗೆ ಇದು ಸ್ಪಷ್ಟವಾಗಿ ಗೋಚರಿಸುತ್ತದೆ.

ಈ ವಿಷಯಗಳನ್ನು ನಾವು ಅಲ್ಲಾಹನ ಗ್ರಂಥ ಮತ್ತು ಅವನ ಸಂದೇಶಕರ(ಸ) ಹದೀಸ್‌ಗಳ ಆಧಾರದಲ್ಲಿ ಜಗತ್ತಿನ ಪ್ರಸ್ತುತ ವಿದ್ಯಮಾನಗಳನ್ನು ಅವಲೋಕನ ನಡೆಸಿಕೊಂಡು ವಿವರಿಸಿದ್ದಾಗಿದೆ. ತೌಹೀದ್‌ನ ಮೂರು ಶಾಖೆಗಳಿವೆ. ಅವುಗಳನ್ನು ಪೂರ್ವಿಕ ವಿದ್ವಾಂಸರು ವಿವರಿಸಿ ಕೊಟ್ಟಿರುತ್ತಾರೆ. ಇನ್ನು ಆ ಕುರಿತು ತಿಳಿದುಕೊಳ್ಳೋಣ....

## ತೌಹೀದ್‌ನ ಮೂರು ಶಾಖೆಗಳು

**1. ತೌಹೀದ್ ರುಬೂಬಿಯತ್:** ಅಲ್ಲಾಹನು ಅವನ ಪ್ರವರ್ತನೆಯಲ್ಲಿ ಏಕನಾಗಿದ್ದಾನೆ. ಅವನ ಹೊರತಾದ ಇತರ ಎಲ್ಲವೂ ಅವನಸೃಷ್ಟಿಯಲ್ಲಿ ಒಳಪಡುವುದು. ಸೃಷ್ಟಿಯ ಕಾರ್ಯದಲ್ಲಿ ಅವನಿಗೆ ಸಹಭಾಗಿಗಳಾಗಿ ಯಾರೂ ಇರುವುದಿಲ್ಲ. ಸೃಷ್ಟಿಯ ಕುರಿತಾದ ಯೋಚನೆಯನ್ನು ಅವನೇ ರೂಪಿಸುತ್ತಾನೆ ಮತ್ತು ಅದನ್ನು ಅವನೇ ಕಾರ್ಯರೂಪಕ್ಕೆ ತರುತ್ತಾನೆ ಎನ್ನುವ ಕುರಿತು ಸ್ಪಷ್ಟವಾದ ವಿಶ್ವಾಸವಿರಬೇಕಾಗಿದೆ.

**2. ತೌಹೀದುಲ್ ಅಸ್ಮಾಅ್‌ವಸ್ಸಿಫಾತ್:** ಪರಿಶುದ್ಧನಾದ ಅಲ್ಲಾಹನಿಗೆ ಅತ್ಯುತ್ತಮವಾದ ನಾಮಗಳಿವೆ. ಅತ್ಯುನ್ನತವಾದ ಗುಣಗಳೂ ಇವೆ. ಅವನು, ಅವನ ನಾಮಗಳು, ಅವನ ಗುಣ ಮತ್ತು ಅವನ ಪ್ರವರ್ತನೆಗಳು ಪರಿಪೂರ್ಣವಾಗಿರುವುವು. ಅವುಗಳಲ್ಲಿ ಯಾವುದೇ ಕುಂದು–ಕೊರತೆಗಳು ಇರುವುದಿಲ್ಲ. ಇವುಗಳಲ್ಲಿ ಅವನನ್ನು ಹೋಲುವ ಅಥವಾ ಅವನಿಗೆ ಸರಿಸಮಾನವಾದವರು ಯಾರೂ ಇರುವುದಿಲ್ಲ ಎಂದು ವಿಶ್ವಾಸವಿರಿಸುವುದಾಗಿದೆ.

**3. ತೌಹೀದುಲ್ ಇಬಾದತ್:** ಅಲ್ಲಾಹನು ಏಕೈಕನಾದ ಆರಾಧ್ಯನಾಗಿದ್ದಾನೆ ಮತ್ತು ಆರಾಧನೆಗೆ ಅತ್ಯಂತ ಅರ್ಹನಾದವನೂ ಆಗಿದ್ದಾನೆ. ಅವನ ಹೊರತು ಅನ್ಯ ಆರಾಧ್ಯರಿಲ್ಲ ಅವನಿಗೆ ಯಾರೂ ಸಹಭಾಗಿಗಳೂ ಇಲ್ಲ ಎನ್ನುವ ವಿಶ್ವಾಸವಾಗಿದೆ.

**ಅಲ್ಲಾಹನ ಏಕತ್ವವನ್ನು (ತೌಹೀದ್) ಸಂಕ್ಷಿಪ್ತವಾಗಿ ಹೀಗೆ ಪ್ರಖ್ಯಾಪಿಸಬಹುದು :**

1. ಅಲ್ಲಾಹು ಸರ್ವ ಚರಾಚರಗಳನ್ನು ಸೃಷ್ಟಿಸಿದವನೆಂದೂ, ಸಕಲ ಜೀವ ಜಾಲಗಳಿಗೆ ಜನ್ಮದಾತನೆಂದೂ, ಆಹಾರವನ್ನು ನೀಡುವವನೆಂದೂ ವಿಶ್ವಾಸವಿರಿಸುವುದು. ಅವನ ಪ್ರವರ್ತನೆಗಳಲ್ಲಿ ಅವನಿಗೆ ಸಹಭಾಗಿಗಳಾಗಿ ಯಾರು ಇಲ್ಲವೆಂದು ನಂಬುವುದು ಮತ್ತು ಅವನು ಸಕಲ ವಿಶ್ವಗಳ ಒಡೆಯನೆಂದು ಆತ್ಮಾರ್ಥಕವಾಗಿ ಒಪ್ಪಿಕೊಳ್ಳುವುದಾಗಿದೆ.

ಈ ಕುರಿತು ಅಲ್ಲಾಹನು ಹೇಳುತ್ತಾನೆ.

لِلّٰهِ مُلْكُ السَّمٰوٰتِ وَالْاَرْضِ
وَمَافِيْهِنَّ وَهُوَعَلٰى كُلِّ شَىْءٍ قَدِيْرٌ • (سورة المائده،

**"ಅಲ್ಲಾಹನು ಭೂಮಿ ಆಕಾಶಗಳ ಮತ್ತು ಅವುಗಳ ನಡುವಿರುವ ಸಕಲ ವಸ್ತುಗಳ ಒಡೆಯನಾಗಿರುತ್ತಾನೆ. ಅವನು ಸಕಲ ವಸ್ತುಗಳ ಮೇಲೆ ಸಾಮರ್ಥ್ಯವಿರುವವನೇ ಆಗಿರುತ್ತಾರೆ"**

(5/17)

ಆದ್ದರಿಂದ ಅಲ್ಲಾಹನೇ ಸರ್ವ ವಸ್ತುಗಳ ಒಡೆಯನಾಗಿರುತ್ತಾನೆ. ಅವುಗಳಲ್ಲಿ ವ್ಯತ್ಯಾಸವನ್ನೂ, ಏರು–ಪೇರನ್ನೂ ಉಂಟುಮಾಡುವವನೂ ಅವನೇ... ಎಲ್ಲವೂ ಅವನ ಇಚ್ಛೆಯನ್ನೇ ಅವಲಂಭಿಸಿಕೊಂಡಿದೆ.

ಅಲ್ಲಾಹನ ಪವಿತ್ರ ವಚನದಲ್ಲಿ ಹೀಗಿದೆ,

اَلَا لَهُ الْخَلْقُ وَالْاَمْرُ تَبَارَكَ اللّٰهُ رَبُّ الْعٰلَمِيْنَ •(سورة الاعراف، الآية ٥٤)

**"ನೆನಪಿರಲಿ ! ಸೃಷ್ಟಿಗಳೆಲ್ಲವೂ ಅವನದೇ, ಅಜ್ಞಾಧಿಕಾರವೂ ಅವನದೇ, ಸಕಲ ಲೋಕಗಳ ಒಡೆಯನಾಗಿರುವ ಅಲ್ಲಾಹು ಮಹಾ ಸಮೃದ್ಧನು"**

**2. ವಿಶೇಷ ಗುಣ ಸಂಪನ್ನನಾಗಿ ಪ್ರಶಂಶಿಸಲ್ಪಡುವ ಅಲ್ಲಾಹನಿಗೆ ಅತ್ಯುತ್ತಮವಾದ ನಾಮಗಳಿವೆ :**

ಅವನ ಸೃಷ್ಟಿಗಳಲ್ಲಿ ಯಾವುದೇ ವಸ್ತು ಅವನನ್ನು ಹೋಲುವುದಿಲ್ಲ ಬದಲಾಗಿ ಅಲ್ಲಾಹನು ಅವನ ನಾಮ, ಗುಣ ಮತ್ತು ಪ್ರವರ್ತನೆಯಲ್ಲಿ ಪರಿಪೂರ್ಣನಾಗಿದ್ದಾನೆ.

**3. ಅವನನ್ನು ಆರಾಧಿಸಬೇಕು ಮಾತ್ರವಲ್ಲ ಆರಾಧನಾ ಕರ್ಮಗಳೆಲ್ಲವೂ ಅವನಿಗೆ ಮೀಸಲಾಗಿರಬೇಕು.**

ಅರ್ಥಾತ್,

1. ಪ್ರಾರ್ಥನೆ (ದುಃಆ) 2. ಭಯ-ಭೀತಿ, 3. ಭರವಸೆ, 4. ಬಯಕೆ, 5. ಆತಂಕ, 6. ಗಾಭರಿ, 6. ನವಾರ್‌ಝ್, 7. ಉಪವಾಸ, 8. ಬಲಿ, 9. ಹರಕೆ ಪ್ರಮಾಣಗಳು. ಈ ಎಲ್ಲಾ ಸಂಗತಿಗಳು ಕೇವಲ ಅಲ್ಲಾಹನಿಗಾಗಿ ವ್ಯಕ್ತಪಡಿಸಬೇಕಾಗಿದೆ ಅಥವಾ ನಿರ್ವಹಿಸಬೇಕಾಗಿದೆ. ಇದು ತೌಹೀದ್‌ನ ಅತ್ಯಂತ ಅನಿವಾರ್ಯ ಬೇಡಿಕೆಯಾಗಿದೆ. ಪೂರ್ವಿಕ ಪ್ರವಾದಿಗಳು ಮತ್ತು ಸಂದೇಶವಾಹಕರು ಪ್ರಸ್ತುತಪಡಿಸಿದ ತೌಹೀದ್ ಇದೇ ಆಗಿದೆ. ತೌಹೀದ್‌ನ ಈ ಸಂದೇಶದೊಂದಿಗೆ ಪ್ರವಾದಿಗಳ ಮುಂದಾಳು, ಪ್ರವಾದಿಗಳ ನೇತಾರ, ಪ್ರವಾದಿಗಳ ಶೃಂಖಲೆಯ ಕಟ್ಟಕಡೆಯ ಕೊಂಡಿ ಲೋಕಾನುಗ್ರಹಿ ಪ್ರವಾದಿ ಮುಹಮ್ಮದ್ (ಸ)ರವರು ನಿಯೋಜಿತರಾದರು.

**ಸರ್ವ ಪ್ರವಾದಿಗಳೂ ಪ್ರತಿಪಾದಿಸಿದ "ತೌಹೀದ್"ನ್ನು ನಾವು ಎರಡು ರೀತಿಯಲ್ಲಿ ವರ್ಗೀಕರಿಸಬಹುದು :**

## الاول : توحيد فى المعرفة والاثبات

**ಒಂದು : ತೌಹೀದ್ ಮಅ್‌ರಿಫತ್‌ವ ಅಸ್‌ಬಾತ್ ಆಗಿದೆ.**

ಅಲ್ಲಾಹನ ನಾಮ, ಗುಣಗಳು, ಸ್ಥಾನಮಾನ, ಸೃಷ್ಟಿ, ಸೃಷ್ಟಿಗಳ ಪರಿಪಾಲನೆ, ಸಂರಕ್ಷಣೆಯ ಕುರಿತು ವಿಶ್ವಾಸವಿಡುವುದಕ್ಕೆ ತೌಹೀದ್ ಮಅ್‌ರಿಫತ್ ವ ಅಸ್‌ಬಾತ್ ಎನ್ನುತ್ತಾರೆ.

ಅಲ್ಲಾಹನ ಮೇಲೆ ವಿಶ್ವಾಸ ತಾಳುವುದು ಮತ್ತು ಅಲ್ಲಾಹನು ಸೃಷ್ಟಿ, ಪರಿಪಾಲನೆ ಮತ್ತು ಸಂರಕ್ಷಣೆಯಲ್ಲಿ ಏಕಮೇವಾದ್ವಿತೀಯನೆಂದು ಸಾಕ್ಷವಹಿಸುವುದು, ಅವನ ನಾಮ

ಮತ್ತು ಗುಣಗಳು ಅವನೊಬ್ಬನಿಗೆ ಅನ್ವಯಿಸುವುದೆಂದು ಧೃಡಪಡಿಸಿಕೊಳ್ಳುವುದು. ಅವನು ಅವನ ಹೊರತಾದ ಸರ್ವ ಜೀವ ಜಾಲಗಳ ಸೃಷ್ಠಿ ಕರ್ತನೂ, ಅವುಗಳಿಗೆ ಆಹಾರವನ್ನು ಪೂರೈಸಿಕೊಡುವ ಅನ್ನದಾತನೂ ಆಗಿದ್ದಾನೆಂದೂ ನಂಬುವುದು. ಅವನು ಸರ್ವ ಸಂಪೂರ್ಣನು. ಎಲ್ಲಾ ರೀತಿಯ ಕುಂದು ಕೊರತೆಗಳಿಂದ ಮುಕ್ತನು, ಪರಿಶುದ್ಧನು. ಮೇಲೆ ಉಲ್ಲೇಖಿಸಿದ ಯಾವುದೇ ಕಾರ್ಯಗಳಲ್ಲಿ ಅವನಿಗೆ ಸಹಭಾಗಿಗಳಿಲ್ಲ. ಅವನಿಗೆ ಸಹಾಯಕರಿಲ್ಲ, ಅವನನ್ನು ಹೋಲುವ ಯಾವುದೇ ವ್ಯಕ್ತಿ–ಶಕ್ತಿಗಳಿಲ್ಲವೆಂದು ಧೃಡನಿಶ್ಚಯ ತಾಳುವುದನ್ನೇ ತೌಹೀದ್ ಮಲ್‌ರಿಫತ್‌ವ ಅಸ್‌ಬಾತ್ ಎನ್ನಲಾಗುತ್ತದೆ.

## الثانی : توحیدالقصد والطلب

**ಎರಡು : ಬಯಕೆ ಮತ್ತು ಬೇಡಿಕೆಯಲ್ಲಿರುವ ತೌಹೀದ್.**

ಬಯಕೆ ಮತ್ತು ಬೇಡಿಕೆಯಲ್ಲಿರುವ ತೌಹೀದ್ ಎಂದರೆ, ನಮ್ಮ ಬಯಕೆ, ನಮ್ಮ ಬೇಡಿಕೆ (ದುಃಆ), ನಮ್ಮ ನಮಾಝ್, ನಮ್ಮ ಉಪವಾಸ ಮತ್ತು ನಮ್ಮೆಲ್ಲಾ ಆರಾದನಾ ಕರ್ಮಗಳನ್ನು ಸರ್ವ ಸಂಪೂರ್ಣವಾಗಿ ಅಲ್ಲಾಹನಿಗಾಗಿ ಮೀಸಲಾಗಿರಿಸುವುದಾಗಿದೆ. ನಮ್ಮ ದಾನ–ಧರ್ಮಗಳು, ಸತ್ಕರ್ಮಗಳು, ಮಾತು, ನಗು ಮತ್ತು ಸರ್ವ ಪ್ರವರ್ತನೆಗಳು ಕೇವಲ ಅಲ್ಲಾಹನನ್ನು ಸಂತೃಪ್ತಿಗೊಳಿಸುವ ಉದ್ದೇಶವನ್ನು ಹೊಂದಿರಬೇಕೆನ್ನುವುದು ಇದರ ತಿರುಳು.

ಆದ್ದರಿಂದ ನಾವು ಅಲ್ಲಾಹನನ್ನು ಮಾತ್ರ ಕರೆದು ಪ್ರಾರ್ಥಿಸಬೇಕು. ಅವನೊಂದಿಗೆ ಮಾತ್ರ ನಮ್ಮ ಅಳಲನ್ನು ತೋಡಿಕೊಳ್ಳಬೇಕು. ಅವನಿಗೆ ಮಾತ್ರ ಹರಕೆ ಹೇಳಬೇಕು. ಸತ್ಕರ್ಮಗಳ ಮೂಲಕ ಅವನ ಸಾಮೀಪ್ಯವನ್ನು ಗಳಿಸಲು ಪ್ರಯತ್ನಿಸಬೇಕು. ರೋಗ ರುಜಿನಗಳಿಂದ ಮುಕ್ತಿಯನ್ನು, ಶತ್ರುಗಳಿಂದ ಸಂರಕ್ಷಣೆಯನ್ನೂ ಪಡೆಯಲು ಅವನಿಗೆ ಮೊರೆ ಹೋಗಬೇಕು. ಇದೆಲ್ಲವೂ ಇಬಾದತ್‌ಗಳಾಗಿದ್ದು ಇದನ್ನೆಲ್ಲಾ ಅಲ್ಲಾಹನಿಗಾಗಿಯಷ್ಟೇ ಮೀಸಲಿರಿಸಬೇಕು.

**ಇದು ತೌಹೀದ್‌ನ ವಿಧಗಳಾಗಿವೆ**

ಬೇಕಿದ್ದರೆ ನೀವು ತೌಹೀದ್‌ನ್ನು ಎರಡು ವಿಧಗಳಾಗಿ ಅರ್ಥೈಸಿಕೊಳ್ಳಿ ಅಥವಾ ಮೂರು ವಿಧಗಳಾಗಿ ಮನನ ಮಾಡಿಕೊಳ್ಳಿ. ಇನ್ನು ಅದನ್ನು ನಾವು ಮೇಲೆ ವಿವರಿಸಿದಂತೆ ಒಂದೇ ಎಂದು ಭಾವಿಸಿದರೂ ಅಡ್ಡಿ ಇಲ್ಲ. ಮನವರಿಕೆ ಮಾಡಿಕೊಳ್ಳುವ ನಿಟ್ಟಿನಲ್ಲಿ ನೀವು ಯಾವ ರೀತಿಯನ್ನು ಅವಲಂಭಿಸಿಕೊಂಡರೂ ಸರಿ. ಅದನ್ನು ಸಮರ್ಪಕವಾಗಿ ಅರ್ಥ ಮಾಡಿಕೊಳ್ಳಬೇಕಾಗಿದ್ದು ಮಾತ್ರ ಅನಿವಾರ್ಯವೇ ಆಗಿದೆ. ಏಕೆಂದರೆ ತೌಹೀದ್

ಅರ್ಥೈಸಿ ಕೊಡಲಿಕ್ಕಾಗಿ ಅಲ್ಲಾಹನು ಪ್ರವಾದಿಗಳನ್ನು ನಿಯುಕ್ತಿಗೊಳಿಸಿದ್ದು ಮಾತ್ರವಲ್ಲದೆ ಗ್ರಂಥಗಳನ್ನೂ ಅವತೀರ್ಣಗೊಳಿಸಿರುತ್ತಾನೆ.

ಎಲ್ಲಾ ಪ್ರವಾದಿಗಳು ಅಭಿಸಂಬೋಧಿಸಿದ ಸಮೂಹಗಳು ಅವರ ಪ್ರವಾದಿಗಳೊಂದಿಗೆ ಸಂಘರ್ಷಕ್ಕಿಳಿದ ಮುಖ್ಯ ಕಾರಣವೇ ಆರಾಧನೆ ಅರ್ಹನು ಏಕನಾದ ಅಲ್ಲಾಹನು ಎಂಬ ತೌಹೀದೇ ಇಬಾದತ್‌ಗೆ ಸಂಬಂಧಿಸಿಕೊಂಡಾಗಿತ್ತು.

ತೌಹೀದ್ ರುಬೂಬಿಯತ್‌ಗೆ ಸಂಬಂಧಿಸಿ ಪ್ರವಾದಿಗಳು ಮತ್ತು ಅವರು ಸಮೂಹಗಳ ಮಧ್ಯೆ ಭಿನ್ನಮತವಿರಲಿಲ್ಲ. ಮಕ್ಕಾ ಮುಶ್ರಿಕರು ಕೂಡಾ ಇದನ್ನು ಅಂಗೀಕರಿಸುತ್ತಿದ್ದರು.

ಪರಿಶುದ್ಧನಾದ ಅಲ್ಲಾಹನು ಪ್ರತಿಯೊಂದು ಜೀವಿಗೂ ಜೀವಿಸುವ ಅವಕಾಶವನ್ನೂ ವ್ಯವಸ್ಥೆಯನ್ನೂ ಕಲ್ಪಿಸಿಕೊಟ್ಟ ಸಂರಕ್ಷಕನಾಗಿದ್ದಾನೆ. ಸರ್ವಚರಾಚರಗಳನ್ನೂ ಸೃಷ್ಟಿಸಿದವನೂ ಅವನೇ. ಸರ್ವ ಜೀವ ಜಂತುಗಳಿಗೂ ಆಹಾರವನ್ನು ಒದಗಿಸಿಕೊಡುವುದು ಅವನೇ ಅವನ ಅಸ್ತಿತ್ವ ಅವನ ನಾಮ ಅವನ ಗುಣಗಳು ಮತ್ತು ಅವನ ಪ್ರವರ್ತನೆಗಳು ಪರಿಪೂರ್ಣವಾಗಿದೆ. ಈ ವಿಷಯಗಳಲ್ಲಿ ಅವನಿಗೆ ಸರಿಸಾಟಿಯಾಗುವವರು ಯಾರೂ ಇಲ್ಲ. ಅವನಿಗೆ ಸಹಾಯಕರೋ ಸಹಭಾಗಿಗಳೊ ಇರುವುದಿಲ್ಲ. ಅವನಂತೆ ಯಾರೂ ಇಲ್ಲ. ಈ ಎಲ್ಲಾ ಸಂಗತಿಗಳ ಬಗ್ಗೆ ಲೋಕದಲ್ಲಿ ದೌತ್ಯ ನಿರ್ವಹಿಸಿದ ಪ್ರವಾದಿಗಳು ಮತ್ತು ಅವರ ಸಮುದಾಯಗಳ ನಡುವೆ ಯಾವುದೇ ಭಿನ್ನಾಭಿಪ್ರಾಯವಿರಲಿಲ್ಲ. ಬದಲಾಗಿ ಮುಶ್ರಿಕರಾದ ಕುರೈಷರು ಮತ್ತು ಇತರ ಬಹುದೇವ ವಿಶ್ವಾಸಿಗಳೂ ಈ ಮಾತನ್ನು ಒಪ್ಪಿಕೊಳ್ಳುತ್ತಿದ್ದರು.

**ಫಿರ್‌ಔನ್ ಅಲ್ಲಾಹನನ್ನು ನಿಷೇಧಿಸಿದ್ದು ಅವನ ಅಹಂಕಾರ ಮತ್ತು ಜಂಭದ ಕಾರಣದಿಂದಾಗಿತ್ತು. ಅವನ ಅಂತರಾಳದಲ್ಲಿ ಇದು ತಪ್ಪೆಂಬ ಪ್ರಜ್ಞೆ ಇತ್ತು.**

ಫಿರ್‌ಔನನ ಪ್ರವರ್ತನೆಗಳು ಅಂದರೆ ದೇವ ನಿಷೇಧ ಮತ್ತು ಸ್ವಯಂ ದೇವನೆಂಬ ವಾದವು ಅವನಲ್ಲಿ ಅಂತರ್ಗತವಾಗಿದ್ದ ಅಹಂಕಾರ ಮತ್ತು ಜಂಭವನ್ನು ಪ್ರತಿಬಿಂಬಿಸುತ್ತದೆ. ವಾಸ್ತವದಲ್ಲಿ ಅವನ ಅಂತರಾಳವು ಸ್ಪಷ್ಟವಾಗಿ ಅವನ ಪ್ರವರ್ತನೆಯನ್ನು ವಿರೋಧಿಸುತ್ತಿದ್ದವು. ಮೂಸಾ(ಅ)ರವರು ಅವನೊಂದಿಗೆ,

لَقَدْ عَلِمْتَ مَآ اَنْزَلَ هٰٓؤُلَآءِ اِلَّا رَبُّ السَّمٰوٰتِ وَالْاَرْضِ بَصَآئِرَ (سورة الاسراء، الآية ١٠٢)

**"ಈ ಪ್ರಬೋಧ ಪೂರ್ಣ ಪ್ರತ್ಯಕ್ಷ ಪ್ರಮಾಣಗಳನ್ನು ಭೂಮಿ ಆಕಾಶಗಳ ಸಂರಕ್ಷಕನ ಹೊರತು ಇನ್ಯಾರೂ ಅವತೀರ್ಣಗೊಳಿಸಿಲ್ಲವೆಂದು ನೀನು ಚೆನ್ನಾಗಿ ತಿಳಿದಿರುವಿ"** ಎಂದು

ಹೇಳಿದರು. ಆದರೂ ಅವನ ಹೃದಯ ಕರಗಲಿಲ್ಲ. ಅವನು ಮತ್ತು ಅವನಂತಹಾ ಜನರ ಕುರಿತು ಅಲ್ಲಾಹು ಹೇಳುತ್ತಾನೆ,

وَجَحَدُوا بِهَا وَاسْتَيْقَنَتْهَا أَنفُسُهُمْ ظُلْمًا وَعُلُوًّا

(سورة النمل الآية ١٤)

**"ಅವರು ಸಂಪೂರ್ಣ ಅಕ್ರಮ ಮತ್ತು ಅಹಂಕಾರದ ಮಾರ್ಗದಿಂದ ಆ ನಿದರ್ಶನಗಳನ್ನು ನಿಷೇಧಿಸಿದರು. ಪ್ರಸ್ತುತಃ ಅವರ ಮನಸ್ಸುಗಳು ಅವನ್ನು ಒಪ್ಪಿಕೊಂಡಿದ್ದವು."**

ಇನ್ನೊಂದು ಕಡೆ ಅಲ್ಲಾಹು ಹೇಳುತ್ತಾನೆ,

قَدْ نَعْلَمُ إِنَّهُ لَيَحْزُنُكَ الَّذِي يَقُولُونَ فَإِنَّهُمْ لَا يُكَذِّبُونَكَ وَلَٰكِنَّ الظَّالِمِينَ بِآيَاتِ اللَّهِ يَجْحَدُونَ • (سورة الانعام،الآية٣٣)

**"ಅವರು ಸೃಷ್ಟಿಸಿ ಹೇಳುತ್ತಿರುವ ಮಾತುಗಳಿಂದ ನಿಮಗೆ ಖೇದವಾಗುತ್ತಿರುವುದು ನಮಗೆ ಗೊತ್ತಿದೆ. ಆದರೆ ಅವರು ನಿರಾಕರಿಸುತ್ತಿರುವುದು ನಿಮ್ಮನ್ನಲ್ಲ. ಈ ಅಕ್ರಮಿಗಳು ವಾಸ್ತವದಲ್ಲಿ ಅಲ್ಲಾಹನ ನಿದರ್ಶನಗಳನ್ನು ನಿರಾಕರಿಸುತ್ತಿದ್ದಾರೆ."**

**ಸತ್ಯ ನಿಷೇಧಿಗಳ ನಿರಾಕರಣೆಗೂ ಅಹಂಕಾರವೇ ಕಾರಣ**

ಅದೇ ಪ್ರಕಾರ ಸತ್ಯ ನಿಷೇಧಿಗಳ ಒಂದು ಕೂಟವು ಬೆಳಕನ್ನೂ ಕತ್ತಲೆಯನ್ನು ಆರಾಧ್ಯನೆಂದು ಪೂಜಿಸುತ್ತದೆ. ಅವರು ಕೂಡಾ ಸತ್ಯಾಂಶವನ್ನು ಅರಿತಿದ್ದೂ ಅಹಂ ಮತ್ತು ಜಂಭದ ಕಾರಣದಿಂದ ಆ ಕುರಿತು ನಿಷೇಧಾತ್ಮಕ ನಿಲುವು ತಳೆದಿದ್ದಾರೆ. ಆದಾಗ್ಯೂ ಅವರು ಅವೆರಡನ್ನು ಒಂದೇ ಎಂದು ಹೇಳಲಿಲ್ಲ. ಏಕೆಂದರೆ ಪ್ರಪಂಚದಲ್ಲಿ ಯಾರೂ ಸೃಷ್ಟಿ ಮತ್ತು ಸಂರಕ್ಷಣೆಗೆ ಎರಡೆರಡು ದೇವರಿದ್ದಾರೆಂದು ಹೇಳುವುದಿಲ್ಲ. ನಿರೀಶ್ವರ ವಾದಿಗಳ ದೇವ ನಿಷೇಧವು ಕೇವಲ ಬಾಯಿಮಾತಿನದ್ದಾಗಿದೆ.. ಅವರ ಅಂತರಾಳದಲ್ಲಿ ಕೂಡಾ ದೇವಾಸ್ತಿತ್ವದ ಕುರಿತು ನಂಬಿಕೆಯ ಅವಶೇಷಗಳು ನಿಕ್ಷೇಪಣೆಗೊಂಡಿದೆ.

## ನಾಸ್ತಿಕರ ಆತ್ಮವಂಚನೆ

ನಾಸ್ತಿಕರು ಸಾರಾಸಗಟಾಗಿ ದೇವಾಸ್ತಿತ್ವವನ್ನು ನಿರಾಕರಿಸುವುದು ಮತ್ತು ಪರಲೋಕದ ಕುರಿತಾಗಿ ಧಿಕ್ಕಾರದ ಧೋರಣೆ ತೋರುವುದನ್ನು ವಿಶೇಷವಾಗಿ ಪರಿಗಣಿಸಬೇಕಾಗಿಲ್ಲ. ಏಕೆಂದರೆ, ಇವರ ಈ ಪ್ರವೃತ್ತಿಯು ಶೈತಾನನು ಇವರ ಮೇಲೆ ಹಿಡಿತ ಸಾಧಿಸಿರುವುದರ ಪರಿಣಾಮವಾಗಿದೆ. ಮಾತ್ರವಲ್ಲದೆ ಅದು ಅವರ ವಿವೇಕವು ಸಂಪೂರ್ಣವಾಗಿ ನಷ್ಟ ಹೊಂದಿರುವುದಕ್ಕೆ ದೃಷ್ಟಾಂತವೂ ಆಗಿದೆ. ಶೈತಾನನು ಇವರನ್ನು ಅಲ್ಲಾಹನ ಪ್ರಕೃತಿಯಿಂದ

ದೂರ ಸರಿಸಿರುವನು. ವಾಸ್ತವದಲ್ಲಿ ಅಲ್ಲಾಹನು ಎಲ್ಲರನ್ನು ಒಂದೇ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತಾನೆ.

ಈ ನಿರೀಶ್ವರ ವಾದಿಗಳ ನಿರಾಕರಣೆಯು ಕೇವಲ ಅವರ ಮಾತಿಗೆ ಸೀಮಿತವಾಗಿದ್ದಾಗಿದೆ. ಇವರ ಹೃದಯವು ದೇವಾಸ್ತಿತ್ವದ ಕುರಿತು ಖಂಡಿತವಾಗಿಯು ಸಾಕ್ಷ್ಯ ನೀಡುತ್ತಲೇ ಇರುತ್ತದೆ. ಏಕೆಂದರೆ ಜಡವಸ್ತುಗಳು ಕೂಡಾ ಈ ವಾಸ್ತವಾಂಶವನ್ನು ಒಪ್ಪಿಕೊಳ್ಳುತ್ತದೆ.

ಈ ಕುರಿತು ಅಲ್ಲಾಹು ಹೇಳುತ್ತಾನೆ.

تُسَبِّحُ لَهُ السَّمٰوٰتُ السَّبْعُ وَالْأَرْضُ وَمَنْ فِيهِنَّ وَإِنْ مِنْ شَيْءٍ
إِلَّا يُسَبِّحُ بِحَمْدِهِ وَلٰكِنْ لَا تَفْقَهُونَ تَسْبِيحَهُمْ إِنَّهُ كَانَ حَلِيمًا
غَفُورًا (سورة الاسراء، الآية ٤٤)

**“ಸಪ್ತ ಗಗನಗಳೂ ಭೂಮಿಯೂ ಅವುಗಳಲ್ಲಿರುವ ಸಕಲ ವಸ್ತುಗಳೂ ಅವನ ಪಾವಿತ್ರ್ಯವನ್ನು ಕೊಂಡಾಡುತ್ತಿವೆ. ಅವನ ಪ್ರಶಂಸೆಯೊಂದಿಗೆ ಅವನ ತಸ್ಬೀಹ್ ಮಾಡದ ಯಾವ ವಸ್ತುವೂ ಇಲ್ಲ. ಆದರೆ ನೀವು ಅವುಗಳ ಸ್ಮರಣೆಯನ್ನು ಗ್ರಹಿಸುವುದಿಲ್ಲ. ವಾಸ್ತವದಲ್ಲಿ ಅವನು ಅತ್ಯಂತ ಸಹನಾಶೀಲನೂ ಕ್ಷಮಾದಾನಿಯೂ ಆಗಿರುತ್ತಾನೆ.”**

ಇನ್ನೊಂದು ಕಡೆ ಅಲ್ಲಾಹನ ವಚನ ಹೀಗಿದೆ,

أَلَمْ تَرَ أَنَّ اللّٰهَ يَسْجُدُ لَهُ مَنْ فِي السَّمٰوٰتِ وَمَنْ فِي الْأَرْضِ
وَالشَّمْسُ وَالْقَمَرُ وَالنُّجُومُ وَالْجِبَالُ وَالشَّجَرُ وَالدَّوَآبُّ وَكَثِيرٌ
مِنَ النَّاسِ وَكَثِيرٌ حَقَّ عَلَيْهِ الْعَذَابُ (سورة الحج، الآية ١٨)

**“ಆಕಾಶಗಳಲ್ಲಿಯೂ ಭೂಮಿಯಲ್ಲಿಯೂ ಇರುವ ಸಕಲವೂ, ಸೂರ್ಯ, ಚಂದ್ರ, ನಕ್ಷತ್ರಗಳೂ, ಪರ್ವತಗಳೂ, ಮರಗಳೂ, ಪ್ರಾಣಿಗಳೂ ಅನೇಕ ಮನುಷ್ಯರೂ ಯಾತನೆಗೆ ಅರ್ಹರಾಗಿರುವ ಅನೇಕರೂ ಅಲ್ಲಾಹನ ಮುಂದೆ ಸಾಷ್ಟಾಂಗ ವೆರಗುತ್ತಿರುವುದನ್ನು ನೀವು ನೋಡಿಲ್ಲವೇ? ಯಾರನ್ನು ಅಲ್ಲಾಹು ಅವಮಾನಗೊಳಿಸಿ ಬಿಡುವನೋ ಅವರನ್ನು ಬೇರೆ ಯಾರೂ ಗೌರವಿಸುವವರಿಲ್ಲ.”**

**ಸೃಷ್ಟಿಕರ್ತನನ್ನು ನಿರಾಕರಿಸುವುದೆಂದರೆ ಬುದ್ಧಿಯನ್ನೂ, ಆತ್ಮಸಾಕ್ಷಿಯನ್ನೂ ನಿರಾಕರಿಸುವುದೆಂದೇ ಅರ್ಥ :**

ಏಕೆಂದರೆ, ಸೃಷ್ಟಿಕರ್ತನನ್ನು ನಿರಾಕರಿಸುವ ಸತ್ಯನಿಷೇಧಿಗಳಾಗಲಿ, ದೇವಧಿಕ್ಕಾರಿಗಳಾಗಲಿ ಅವರೆಲ್ಲರೂ ಸ್ವಯಂ ಅವರ ಬುದ್ಧಿಯನ್ನು ಕಡೆಗಣಿಸಿದವರೂ ಅವರ ಆತ್ಮಸಾಕ್ಷಿಯ

ವಿರುದ್ಧ ಪ್ರವರ್ತಿಸಿದವರೂ ಆಗಿದ್ದಾರೆ. ಏಕೆಂದರೆ ಬುದ್ಧಿ ಮತ್ತು ಆತ್ಮವು ಸೃಷ್ಟಿಕರ್ತನ ಉಪಸ್ಥಿತಿಯನ್ನು ಸದಾ ದೃಢೀಕರಿಸುತ್ತಲೇ ಇರುತ್ತದೆ. ಪ್ರಪಂಚವನ್ನು ನಿಯಂತ್ರಿಸುವ, ಸೃಷ್ಟಿಗಳ ಅವಶ್ಯಕತೆಗಳನ್ನು ಪೂರೈಸುವ ಶಕ್ತಿಯನ್ನು ಬುದ್ಧಿ ಮತ್ತು ಆತ್ಮವು ನಿರಾಕರಿಸುವುದಾದರೂ ಹೇಗೆ? ಸರಿಸಾಟಿ ಇಲ್ಲದ ಆ ಶಕ್ತಿ – ಸಹಭಾಗಿಗಳೋ, ಸಹಾಯಿಗಳೋ ಇಲ್ಲದ ಆ ಮಹಾಶಕ್ತಿ, ಸರ್ವ ಚರಾಚರ ವಸ್ತುಗಳ ಮೇಲೆ ನಿಯಂತ್ರಣ ಹೊಂದಿರುವ ಆ ಮಹಾಮಹಿಮನಾದ ಅಲ್ಲಾಹನು ಅಕ್ರಮಿಗಳು ಆರೋಪಿಸುವ ಸರ್ವ ಕುಂದುಕೊರತೆಗಳಿಂದಲೂ ಪರಿಶುದ್ಧನಾಗಿರುವನು. ಆದ್ದರಿಂದಲೇ ನಾವು ಹೇಳುವುದು.

ಆ ಬಹುದೇವ ವಿಶ್ವಾಸಿಗಳು ಸೃಷ್ಟಿ ಮತ್ತು ಗುಣ ನಾಮಗಳಲ್ಲಿ ಅಲ್ಲಾಹನು ಏಕನೆಂದು ಅಂಗೀಕರಿಸುತ್ತಿದ್ದರು. ಅವರು ಇದನ್ನು ನಿರಾಕರಿಸುತ್ತಿರಲಿಲ್ಲ. ಸರ್ವವನ್ನು ಸೃಷ್ಟಿಸಿದವನು, ಸಂರಕ್ಷಿಸುವವನು, ಅನ್ನಾಹಾರವನ್ನು ನೀಡುವವನು, ಮಳೆ ಸುರಿಸುವವನು, ಜೀವನವನ್ನು ಮರಣವನ್ನೂ ದಯಪಾಲಿಸುವವನು ಅಲ್ಲಾಹನೆಂದು ಅವರು ಸಮ್ಮತಿಸುತ್ತಿದ್ದರು.

## ಪ್ರವಾದಿಗಳ ಕ್ರಮವನ್ನು ಅನುಸರಿಸಿಕೊಂಡು ಇಸ್ಲಾಮಿನ ಸಂದೇಶ ಪ್ರಚಾರ ಕಾರ್ಯವನ್ನು ನಡೆಸಬೇಕಾಗಿದೆ

ಅಲ್ಲಾಹನ ದಾಸರೇ! ಸಂದೇಶ ಪ್ರಚಾರಕ್ಕೆ ನೀವು ಅಲ್ಲಾಹನ ಸಂದೇಶ ವಾಹಕರ ಕ್ರಮಕ್ಕೆ ವ್ಯತಿರಿಕ್ತವಾದ ಕ್ರಮವನ್ನು ಸ್ವೀಕರಿಸಿಕೊಳ್ಳಬೇಡಿರಿ. ಹಾಗೆ ಮಾಡಿದರೆ ನಿಮಗೆ ಪುಣ್ಯ ಮತ್ತು ಪ್ರತಿಫಲವು ಲಭಿಸಲಾರದು.

ನಿನಗೆ ಸತ್ಯವು ಮನವರಿಕೆಯಾಗಿದ್ದರೆ, ಆ ಸತ್ಯವನ್ನು ತೆರೆದು ಹೇಳುವುದು ನಿನ್ನ ಮಟ್ಟಿಗೆ ಅತ್ಯಂತ ಶ್ರೇಯಸ್ಕರ ಸಂಗತಿಯಾಗಿದೆ. ಅದನ್ನು ಜನರಲ್ಲಿ ಪ್ರಚರಿಸುವುದು ಮತ್ತು ಅದನ್ನು ವಿವರಿಸಿಕೊಡುವ ನಿಟ್ಟಿನಲ್ಲಿ ಅವಿರತವಾಗಿ ಶ್ರಮಿಸುವುದು ನಿಮ್ಮ ಬಾಧ್ಯತೆಯಾಗಿದೆ. ಅರಿವಿಲ್ಲದೆ ಶಿರ್ಕ್ ಬಿದ್‌ಅತ್‌ಗಳಲ್ಲಿ ಬಿದ್ದುಕೊಂಡಿರುವ ಜನರು ನಿನ್ನಿಂದ ಸತ್ಯವನ್ನು ಅರಿತುಕೊಂಡು ತೌಹೀದನ್ನು ಸ್ವೀಕರಿಸಿ ಮುಹಮ್ಮದ್(ಸ)ರವರನ್ನು ಯಥಾವತ್ತಾಗಿ ಅನುಸರಿಸಿ ನಡೆಯುವವರಾಗಿ ಮಾರ್ಪಟ್ಟರೆ ನಿನ್ನ ಮಟ್ಟಿಗೆ ಅದೊಂದು ಅನರ್ಘ್ಯ ನಿಧಿಯಾಗಿರುವುದು. ಇನ್ನು ಅವರಿಂದ ಈ ಸತ್ಯವು ಇನ್ನಷ್ಟು ಪ್ರಚಾರಕ್ಕೆ ಬರುವುದಾದರೆ ಲೋಕಾವಸಾನದ ತನಕವೂ ನಿನ್ನ ಪಾಲಿಗೆ ಅದರ ಪುಣ್ಯವು ಜಮೆಯಾಗುತ್ತಲೇ ಇರುವುದು. ಇದಕ್ಕಿಂತ ದೊಡ್ಡ ಭಾಗ್ಯ ಬೇರೇನಿದೆ?

ಅಲ್ಲಾಹನು ಹೇಳುತ್ತಾನೆ,

وَمَنْ أَحْسَنُ قَوْلًا مِّمَّن دَعَا إِلَى اللَّهِ وَعَمِلَ صَالِحًا وَقَالَ إِنَّنِي
مِنَ الْمُسْلِمِينَ (سورة فصلت، الآية ٣٣)

**"ಅಲ್ಲಾಹನ ಕಡೆಗೆ ಆಹ್ವಾನಿಸಿದ, ಸತ್ಕರ್ಮವೆಸಗಿದ ಮತ್ತು ನಾನು 'ಮುಸ್ಲಿಮ್' ಎಂದು ಹೇಳುತ್ತಿದ್ದ ವ್ಯಕ್ತಿಯ ಮಾತಿಗಿಂತ ಶ್ರೇಷ್ಟವಾದ ಮಾತು ಇನ್ನಾರದಾಗಿರಲು ಸಾಧ್ಯ!"**

ಅಲ್ಲಾಹು ಇನ್ನೊಂದು ಕಡೆ ಹೇಗೆ ಹೇಳುತ್ತಾನೆ.

قُلْ هَٰذِهِ سَبِيلِي أَدْعُو إِلَى اللَّهِ عَلَىٰ بَصِيرَةٍ أَنَا وَمَنِ اتَّبَعَنِي
وَسُبْحَانَ اللَّهِ وَمَا أَنَا مِنَ الْمُشْرِكِينَ • (سورة يوسف، الآية ١٠٨)

**"ನೀವು ಅವರೊಡನೆ ಸ್ಪಷ್ಟವಾಗಿ ಹೇಳಿಬಿಡಿರಿ, "ಇದೇ ನನ್ನ ಮಾರ್ಗ. ನಾನು ಅಲ್ಲಾಹನ ಕಡೆಗೆ ಕರೆ ನೀಡುತ್ತೇನೆ. ನಾನು ನನ್ನ ಸಂಗಾತಿಗಳೂ ಸಂಪೂರ್ಣ ಪ್ರಕಾಶದಲ್ಲಿ ದಾರಿ ಕಾಣುತ್ತಿದ್ದೇವೆ. ಅಲ್ಲಾಹ್ ಅತ್ಯಂತ ಪಾವನನು ಸಹಭಾಗಿಗಳಾಗಿಸುವವರೊಂದಿಗೆ ನನಗೆ ಯಾವ ಸಂಬಂಧವೂ ಇಲ್ಲ"**

ಅಲ್ಲಾಹನ ಇನ್ನೊಂದು ವಚನದಲ್ಲಿ ಹೀಗಿದೆ.

ادْعُ إِلَىٰ سَبِيلِ رَبِّكَ بِالْحِكْمَةِ وَالْمَوْعِظَةِ الْحَسَنَةِ وَجَادِلْهُم
بِالَّتِي هِيَ أَحْسَنُ • (سورة النحل، الآية ١٢٥)

**ಓ ಪ್ರವಾದಿಗಳೇ! ಯುಕ್ತಿ ಹಾಗೂ ಸದುಪದೇಶಗಳ ಮೂಲಕ ನೀವು ಸಂರಕ್ಷಕನ ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ, ಮತ್ತು ಜನರೊಂದಿಗೆ ಅತ್ಯುತ್ತಮವಾಗಿ ವಾದಿಸಿರಿ."**

ಪ್ರವಾದಿ(ಸ) ರವರ ಪವಿತ್ರ ವಚನದಲ್ಲಿ ಹೀಗಿದೆ.

مَنْ دَلَّ عَلَىٰ خَيْرٍ فَلَهُ مِثْلُ أَجْرِ فَاعِلِهِ (رواه مسلم في صحيحه)

**"ಜನರನ್ನು ಒಳಿತಿನ ಕಡೆಗೆ ಆಮಂತ್ರಿಸುವ ಮಾರ್ಗದರ್ಶನ ನೀಡುವ ವ್ಯಕ್ತಿಗೆ ಒಳಿತನ್ನು ಪ್ರವರ್ತಿಸಿದ ಜನರಿಗೆ ಲಭಿಸಿದಷ್ಟೇ ಪುಣ್ಯಗಳು ಲಭಿಸುವುದು"** ಇದನ್ನು ಇಮಾಮ್ ಮುಸ್ಲಿಮ್‌ರವರ ದೃಢೀಕೃತ ಹದೀಸ್‌ಗಳ ಸಾಲಲ್ಲಿ ಕಾಣಬಹುದಾಗಿದೆ.

ಅದೇ ಪ್ರಕಾರ ಪ್ರವಾದಿವರ್ಯರು(ಸ) ಹಝ್ರತ್ ಅಲಿ(ರ)ರವರನ್ನು ಖೈಬರ್‌ಗೆ ಕಳುಹಿಸಿಕೊಡುವಾಗ ಹೇಳಿದರು.

فَوَاللَّهِ لَأَنْ يَهْدِيَ اللَّهُ بِكَ رَجُلًا وَاحِدًا خَيْرٌ لَكَ مِنْ حُمْرِ
النَّعَمِ. (متفق على صحته)

**"ಅಲ್ಲಾಹನಾಣೆ! ಅಲ್ಲಾಹನು ನಿನ್ನ ಮೂಲಕ ಯಾರಿಗಾದರೂ ಸನ್ಮಾರ್ಗವು ಲಭಿಸುವಂತೆ ಮಾಡಿದರೆ ಅದು ನಿನ್ನ ಪಾಲಿಗೆ ಕೆಂಪು ಒಂಟೆಗಿಂತಲೂ ಉತ್ತಮವಾಗಿರುವುದು"**

(ಮುತ್ತಫಕುನ್ ಅಲೈಹಿ)

ಅಲ್ಲಾಹನು ನಮಗೆಲ್ಲರಿಗೂ ಈ ಸತ್ಯಧರ್ಮದ ಜ್ಞಾನವನ್ನು ಪಡೆಯಲು ಮತ್ತು ಅದನ್ನು ಅಳವಡಿಸಿಕೊಂಡು ಜೀವಿಸಲು ಅನುಗ್ರಹ ನೀಡಲಿ. ಅಲ್ಲಾಹು ನಮಗೆಲ್ಲ ಅವನ ಕ್ರೋಧದಿಂದ ಮತ್ತು ಅದಕ್ಕೆ ಕಾರಣವಾಗುವ ಸರ್ವಫಿತ್ನಗಳಿಂದ ಅಭಯ ನೀಡಲಿ. ಅವನು ಅವನ ಸದ್ಧರ್ಮವನ್ನು ಲೋಕದೆಲ್ಲೆಡೆ ಪ್ರಶೋಭಿಸುವಂತೆ ಮಾಡಲಿ. ಈ ನೆಲೆಯಲ್ಲಿ ಪ್ರವರ್ತಿಸುವವರಿಗೆ ಅವನು ಸಹಾಯ ನೀಡಲಿ. ಮುಸಲ್ಮಾನರಲ್ಲಿ ಸಂಸ್ಕರಣೆಯನ್ನು ಸಮನ್ವಯವನ್ನು ಉಂಟು ಮಾಡಲಿ. ಅವರಿಗೆ ಅವರ ಪೈಕಿ ಶ್ರೇಷ್ಠರನ್ನು ಆಜ್ಞಾಧಿಕಾರಿಗಳನ್ನಾಗಿ ಮಾಡಲಿ. ನಿಶ್ಚಯವಾಗಿಯೂ ಅವನು ಸರ್ವ ಕುಂದು ಕೊರತೆಗಳಿಂದ ಮುಕ್ತನೂ ಅತುನ್ನತನೂ ಆಗಿರುವನು. ಅತ್ಯಂತ ಉದಾರಿಯೂ ಕಾರುಣ್ಯವಂತನೂ ಆಗಿರುವನು.

وصلى الله على عبده ورسوله نبينا محمد وعلى اله

واصحابه والتابعين لهم باحسان الى يوم الدين.

ಅಲ್ಲಾಹು ಅವನ ದಾಸರೂ ಸಂದೇಶವಾಹಕರೂ ಆಗಿರುವ ನಮ್ಮ ಪ್ರವಾದಿ ಮುಹಮ್ಮದ್(ಸ), ಅವರ ಕುಟುಂಬ ಮತ್ತು ಅವರ ಸಹಚರರ ಮೇಲೆ ಕರುಣೆಯನ್ನು ವರ್ಷಿಸಲಿ. ಅದೇ ಪ್ರಕಾರ ಅವರನ್ನು ಅಂತ್ಯ ದಿನದ ತನಕ ಸಂಪೂರ್ಣ ಶ್ರದ್ಧೆಯೊಂದಿಗೆ ಅನುಸರಿಸುವ ಸರ್ವ ಸತ್ಯ ವಿಶ್ವಾಸಿಗಳ ಮೇಲೂ ಕರುಣೆ ತೋರಲಿ.



## ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸುವುದು

**ಪ್ರಶ್ನೆ : ಶಿರ್ಕ್ ಎಂದರೇನು? ಮತ್ತು ಅಲ್ಲಾಹನ ವಚನ**

**يَاَيُّهَا الَّذِيْنَ آمَنُوا اتَّقُوا اللّٰهَ وَابْتَغُوْا اِلَيْهِ الْوَسِيْلَةَ...... (سورة المائدة، الآية ٣٥)** ಇದರ ತಾತ್ಪರ್ಯವೇನು?

ಉತ್ತರ : ಆರಾಧನೆಯಲ್ಲಿ ಅಲ್ಲಾಹನೊಂದಿಗೆ ಇತರರನ್ನು ಸಹಭಾಗಿಗಳಾಗಿ ಸಂಕಲ್ಪಿಸಿಕೊಳ್ಳುವುದಕ್ಕೆ ಶಿರ್ಕ್ ಎನ್ನಲಾಗುತ್ತದೆ. ಪ್ರತಿಮೆ ಅಥವಾ ಇತರ ಯಾರನ್ನಾದರೂ ಕೂಗಿ ಕರೆಯುವುದು, ಅವರೊಂದಿಗೆ ಸಹಾಯ ಯಾಚಿಸುವುದು ಅವರಿಗೆ ಹರಕೆ ಹೇಳುವುದು, ಅವರಿಗಾಗಿ ನಮಾಝ್ ನಿರ್ವಹಿಸುವುದು, ಉಪವಾಸ ಅನುಷ್ಠಿಸುವುದು, ಮೃಗಬಿ ಕೊಡುವುದು, ಪ್ರವಾದಿ(ಸ)ರವರೊಂದಿಗೆ, ಅಬ್ದುಲ್ ಖಾದಿರ್ ಜೀಲಾನಿ(ರ) ಯವರೊಂದಿಗೆ ಅಥವಾ ಇಂತಹಾ ಇತರ ಯಾವುದಾದರೂ ಪ್ರವಾದಿಗಳು, ಜಾಲಿಯಾಗಳು, ಮಹಾತ್ಮರೊಂದಿಗೆ ಅಬೌತಿಕ ರೀತಿಯ ಸಹಾಯ ಹೋಗುವುದು ಮುಂತಾದ ಎಲ್ಲಾ ವಿಷಯಗಳೂ ಶಿರ್ಕ್‌ನಲ್ಲಿ ಒಳಪಡುತ್ತದೆ.

ಅದೇ ಪ್ರಕಾರ ನಕ್ಷತ್ರಗಳೊಂದಿಗೆ, ಜಿನ್ನ್‌ಗಳೊಂದಿಗೆ ಸಹಾಯ ಬೇಡುವುದು. ಅವುಗಳೊಂದಿಗೆ ಸಮಸ್ಯೆಯನ್ನು ತೋಡಿಕೊಳ್ಳುವುದು ಮುಂತಾದ ಕಾರ್ಯಗಳು ಶಿರ್ಕ್ ಎಂದು ಪರಿಗಣಿಸಲ್ಪಡುತ್ತದೆ.

ಆರಾಧನೆಗಳೆಂದು ಪರಿಗಣಿಸಲಾದ ಯಾವುದಾದರೂ ಒಂದು ಕಾರ್ಯವನ್ನು ಪ್ರತಿಮೆಗಳು, ಮೃತರನ್ನು ಸಂಕಲ್ಪಿಸಿಕೊಂಡು ಪ್ರವರ್ತಿಸುವುದಾದರೆ ಅದು ಅಲ್ಲಾಹನಿಗೆ ಸಹಭಾಗಿಗಳನ್ನು ಸಂಕಲ್ಪಿಸಿದಂತೆ ಅಂದರೆ ಶಿರ್ಕ್ ಮಾಡಿದಂತೆ ಎಂದು ಪರಿಗಣಿಸಲ್ಪಡುವುದು.

ಅಲ್ಲಾಹು ಸುಬ್‌ಹಾನಹುವತಾಲ ಹೇಳುತ್ತಾನೆ

**وَلَوْ اَشْرَكُوْا لَحَبِطَ عَنْهُمْ مَّا كَانُوْا يَعْمَلُوْنَ (سورة الانعام، الآية٨٨)**

**"ಅವರೆಲ್ಲಾದರೂ ದೇವ ಸಹಭಾಗಿತ್ವ ಮಾಡುತ್ತಿದ್ದರೆ ಅವರು ಮಾಡಿದ್ದೆಲ್ಲವೂ ವ್ಯರ್ಥವಾಗುತ್ತಿತ್ತು"** 6/88

ಅದೇ ಪ್ರಕಾರ ಅಲ್ಲಾಹನ ಇನ್ನೊಂದು ವಚನ ಹೀಗಿದೆ.

وَلَقَدْ أُوحِيَ إِلَيْكَ وَإِلَى الَّذِينَ مِنْ قَبْلِكَ لَئِنْ أَشْرَكْتَ لَيَحْبَطَنَّ عَمَلُكَ وَلَتَكُونَنَّ مِنَ الْخَاسِرِينَ (سورة الزمر، الآية٦٥)

“ನೀವು ಅಲ್ಲಾಹನೊಂದಿಗೆ ಸಹಭಾಗಿಗಳನ್ನು ಸಂಕಲ್ಪಿಸಿದರೆ ನಿಮ್ಮ ಕರ್ಮವು ನಿರರ್ಥಕಗೊಳ್ಳುವುದು ಮತ್ತು ನೀವು ನಷ್ಟ ಹೊಂದಿದವರಲ್ಲಾಗುವಿರೆಂದು ನಿಮ್ಮ ಕಡೆಗೂ, ನಿಮಗಿಂತ ಮುಂಚೆ ಗತಿಸಿದ ಸಕಲ ಪ್ರವಾದಿಗಳ ಕಡೆಗೂ 'ವಹ್ಯ್' ಮಾಡಲಾಗಿದೆ.

**ಅತ್ಯಂತ ದೊಡ್ಡ ಧಿಕ್ಕಾರಿ ಅಥವಾ ಅತ್ಯಂತ ದೊಡ್ಡ ಶಿರ್ಕ್ ಪ್ರವರ್ತಿಸುವ ವ್ಯಕ್ತಿ**

ಎಲ್ಲಾ ಆರಾಧನಾ ಕರ್ಮಗಳನ್ನು ಅಲ್ಲಾಹೇತರರಿಗಾಗಿ ನಿರ್ವಹಿಸುವುದು ಶಿರ್ಕ್ ಆಗಿದೆ. ಇದನ್ನು ಕೂಡಾ ಧರ್ಮ ಧಿಕ್ಕಾರವೆಂದು ಹೇಳಲಾಗುತ್ತದೆ. ಅಲ್ಲಾಹನ ನಿಯಮ ನಿರ್ದೇಶನಗಳನ್ನು ಧಿಕ್ಕರಿಸಿ ಸ್ವೇಚ್ಛಾಚಾರಿಯಾಗಿ ತನ್ನ ಆರಾಧನಾ ಕರ್ಮಗಳನ್ನು ಅಲ್ಲಾಹೇತರಿಗೆ ಅಂದರೆ ಮರ, ಕಲ್ಲು, ಪ್ರತಿಮೆ, ಜಿನ್ನಗಳಿಗೆ ನಿರ್ವಹಿಸಿದರೆ,

ಮೃತರಾದ ಔಲಿಯಾ ಅಂಬಿಯಾಗಳೊಂದಿಗೆ ಸಹಾಯ ಅಭ್ಯರ್ಥಿಸಿಕೊಳ್ಳುವಂತಹಾ ಆರಾಧನೆ ನಿರ್ವಹಿಸಿದರೆ ಅಥವಾ ಅವರಿಗಾಗಿ ಉಪವಾಸ ಅನುಷ್ಠಿಸಿದರೆ, ಹಾಗೆ ಅಲ್ಲಾಹ್‌ನ ಕುರಿತು ಸಂಪೂರ್ಣ ಅಶ್ರದ್ಧೆ ತೋರಿದರೆ ಅಂತಹಾ ವ್ಯಕ್ತಿ ಅತ್ಯಂತ ದೊಡ್ಡ ಅಕ್ರಮಿ, ಧಿಕ್ಕಾರಿ ಅಥವಾ ಶಿರ್ಕ್ ಮಾಡುವವನೆಂದು ಕರೆಯಲ್ಪಡುತ್ತಾನೆ. (ಅಲ್ಲಾಹು ಇದರಿಂದ ನಮ್ಮೆಲ್ಲರನ್ನು ರಕ್ಷಿಸಲಿ)

**ಅಲ್ಲಾಹನ ಅಸ್ತಿತ್ವವನ್ನೇ ನಿರಾಕರಿಸುವ (ಕಮ್ಯುನಿಸ್ಟರ್ ನಿರೀಶ್ವರ ವಾದಿಗಳು)ವರು ಅತ್ಯಂತ ದೊಡ್ಡ ಸತ್ಯನಿಷೇಧಿಗಳು (ಕಾಫಿರ್) ಅಥವಾ ಪಥ ಭ್ರಷ್ಟರು:**

ಅಲ್ಲಾಹನ ಅಸ್ತಿತ್ವವನ್ನು ನಿರಾಕರಿಸುತ್ತಾ ಇಲ್ಲಿ ಯಾವ ಆರಾಧ್ಯರೂ? ಇಲ್ಲ. ಜೀವನವು ಒಂದು ಅನಶ್ವರ ಸೌಭಾಗ್ಯವಾಗಿದೆ ಎನ್ನುವವರಿದ್ದಾರೆ.

ಕಮ್ಯುನಿಸ್ಟರು ಮತ್ತು ನಿರೀಶ್ವರವಾದಿಗಳು ಅಲ್ಲಾಹನ ಅಸ್ತಿತ್ವವನ್ನೇ ನಿರಾಕರಿಸುತ್ತಾರೆ.

ಜನರಲ್ಲಿ ಅತ್ಯಂತ ದೊಡ್ಡ ಸತ್ಯ ನಿಷೇಧಿ(ಕಾಫಿರ್)ಗಾರ ಮತ್ತು ಪಥ ಭ್ರಷ್ಟರು ಇಂತಹವರೇ ಆಗಿದ್ದಾರೆ. (ಇಂತಹವರಿಂದ ಅಲ್ಲಾಹು ನಮ್ಮನ್ನು ರಕ್ಷಿಸಲಿ)

ಇಲ್ಲಿ ಇದನ್ನು ಪ್ರಸ್ತಾಪಿಸಿರುವ ಉದ್ದೇಶವೇನೆಂದರೆ ಇದು ಮತ್ತು ಇಂತಹಾ ಪ್ರವೃತ್ತಿಗಳೆಲ್ಲಾ 'ಶಿರ್ಕ್' ಎಂದು ಪರಿಗಣಿಸಲ್ಪಡುತ್ತದೆ. ಈ ನಡವಡಿಯನ್ನು ಅಲ್ಲಾಹನಿಗೆ ಸಹಭಾಗಿಗಳನ್ನು ಸಂಕಲ್ಪಿಸುವುದೆಂದೂ ಹೇಳಲಾಗುತ್ತದೆ.

**ಮೃತರೊಂದಿಗೆ ಸಹಾಯ ಯಾಚಿಸುವುದನ್ನು 'ವಸೀಲ' ಎಂದು ಹೇಳುವುದು ತಪ್ಪು ಇದು ಒಂದು ದೊಡ್ಡ ಶಿರ್ಕ್ ಆಗಿರುತ್ತದೆ**

ಕೆಲವರು ತಮ್ಮ ಅಜ್ಞಾನ ಮತ್ತು ತಿಳಿಗೇಡಿತನದ ಕಾರಣದಿಂದ ಮೃತರನ್ನು ಕೂಗಿ ಕರೆಯುವುದು ಮತ್ತು ಅವರೊಂದಿಗೆ ತಮ್ಮ ಸಮಸ್ಯೆಯನ್ನು ಹೇಳಿಕೊಳ್ಳುವುದನ್ನು 'ವಸೀಲ' ಎಂದು ಹೇಳುತ್ತಾರೆ. ಮತ್ತು ಇದನ್ನು ಅನುವದನೀಯ ಕಾರ್ಯವೆಂದು ಸಮರ್ಥಿಸಿಕೊಳ್ಳುತ್ತಾರೆ. ವಾಸ್ತವದಲ್ಲಿ ಇದೊಂದು ದೊಡ್ಡ ತಪ್ಪಾಗಿದೆ. ಇದು ಅಲ್ಲಾಹನಿಗೆ ಸಹಭಾಗಿಗಳನ್ನು ಕಲ್ಪಿಸಿಕೊಳ್ಳುವ ಪ್ರವೃತ್ತಿಯಲ್ಲಿ ಒಳಪಡುತ್ತದೆ. ಲೋಕದಲ್ಲಿ ಕೆಲವರು ಮತ್ತು ಮುಶ್ರಿಕರು ಇದನ್ನು ವಸೀಲ ಎಂದರೂ ಈ ವಸೀಲವೇ ಮುಶ್ರಿಕರ ದೀನ್ ಆಗಿತ್ತೆನ್ನುವುದನ್ನು ಮರೆಯಕೂಡದು. ಈ ಕಾರಣಕ್ಕಾಗಿಯೇ ಅಲ್ಲಾಹನು ಅವರನ್ನು ಖಂಡಿಸಿದ್ದಾನೆ ದಂಡಿಸಿದ್ದಾನೆ. ಇಂತಹಾ ಕಾಯಕಗಳಿಂದ ಜನರನ್ನು ಎಚ್ಚರಿಸಲು ತಡೆವುದಿಂದೇ ಅಲ್ಲಾಹನು ಪ್ರವಾದಿಗಳನ್ನು ನಿಯೋಜಿಸಿದ್ದಾಗಿದೆ ಗ್ರಂಥಗಳನ್ನು ಇಳಿಸಿ ಕೊಟ್ಟಿದ್ದಾನೆ.

ಕುರ್ಆನಿನಲ್ಲಿ ಪ್ರಸ್ತಾಪವಾಗಿರುವ ವಸೀಲದ ತಾತ್ವರ್ಯವೇನು?

ಅಲ್ಲಾಹನು ಹೇಳುತ್ತಾನೆ,

يَاأَيُّهَا الَّذِينَ آمَنُوا اتَّقُوا اللّٰهَ وَابْتَغُوا إِلَيْهِ الْوَسِيلَةَ (سورة المائدة، الآية٣٥)

**"ಓ ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ಅವನ ಸಾಮೀಪ್ಯದ ಸಾದನವನ್ನು ಹುಡುಕಿರಿ. ಮತ್ತು ಅವನ ಮಾರ್ಗದಲ್ಲಿ ಪರಿಶ್ರಮಿಸಿರಿ. ನಿಮಗೆ ವಿಜಯ ಪ್ರಾಪ್ತಿಯಾಗಲೂಬಹುದು"**

ಈ ವಚನದಲ್ಲಿ ಪ್ರಸ್ತಾಪಗೊಂಡ 'ವಸಿಲ'ದ ತಾತ್ವರ್ಯ ಅಲ್ಲಾಹನನ್ನು ಅನುಸರಿಸುತ್ತಾ ಅವನ ವಿಧಿ ನಿರ್ದೇಶನಗಳನ್ನು ಪರಿಸುತ್ತಾ ಅವನ ಸಾಮೀಪ್ಯವನ್ನು ಅರಸಬೇಕೆನ್ನುವುದಾಗಿದೆ. ಲೋಕದ ಎಲ್ಲಾ ವಿದ್ವಾಂಸರೂ ಈ ಪ್ರಕಾರವೇ ಇದನ್ನು ಅರ್ಥೈಸಿ ಕೊಟ್ಟಿದ್ದಾರೆ.

ಆದ್ದರಿಂದ ನಮಾಝ್ ಅಲ್ಲಾಹನ ಸಾಮೀಪ್ಯಕ್ಕಿರುವ ಸಾದನವಾಗಿದ್ದೆ.

ಇದೊಂದು 'ವಸೀಲ' ಆಗಿರುತ್ತದೆ. ಅದೇ ಪ್ರಕಾಶ ಅಲ್ಲಾಹ್‌ನ ಹೆಸರಲ್ಲಿ ಮೃಗ ಬಲಿ(ಕುರ್ಬಾನಿ) ಕೊಡುವುದು ಇದೆಲ್ಲವೂ ಒಂದು ವಸೀಲವಾಗಿದೆ. ಉಪವಾಸವು ಒಂದು ವಸೀಲವಾಗಿದೆ, ದಾನ ಕೂಡಾ ಒಂದು ವಸೀಲ (ಅದೇ ಪ್ರಕಾರ ಅಲ್ಲಾಹನ ಸ್ಮರಣೆ, ಕುರ್ಆನ್ ಪರಾಯಣ ಇದೆಲ್ಲವೂ 'ವಸೀಲ' ಎನ್ನಬಹುದಾದ ಕಾರ್ಯಗಳಾಗಿವೆ.

ಇದೆಲ್ಲವೂ ಅಲ್ಲಾಹ್‌ನ ಈ ವಚನದಲ್ಲಿ ಒಳಪಡುತ್ತದೆ:

اِتَّـقُـوااللّٰـهَ وَابْتَـغُـوْااِلَيْـهِ الْوَسِيْلَةَ وَجَاهِدُوْا فِىْ سَبِيْلِهٖ (سـورة المائدة، الآية٣٥)

**"ಓ ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ಅವನ ಸಾಮೀಪ್ಯದ ಸಾಧನವನ್ನು ಹುಡುಕಿರಿ ಮತ್ತು ಅವನ ಮಾರ್ಗದಲ್ಲಿ ಪರಿಶ್ರಮಿಸಿರಿ. ನಿಮಗೆ ವಿಜಯ ಪ್ರಾಪ್ತಿಯಾಗಲೂಬಹುದು"**

ಈ ವಚನದಲ್ಲಿ ಅಲ್ಲಾಹನು ಅವನ ವಿಧಿ ನಿರ್ದೇಶನವನನು ಪಾಲಿಸುತ್ತಾ ಅವನ ಸಾಮೀಪ್ಯದ ದಾರಿ ಕಂಡುಕೊಳ್ಳುವಂತೆ ಸೂಚಿಸಿದ್ದಾನೆ.

**'ವಸೀಲ'ದ ಕುರಿತು ಕುರ್‌ಆನ್ ವ್ಯಾಖ್ಯಾನಕಾರರ ವಿವರಣೆ**

ಇಬ್ನ್ ಕಸೀರ್, ಇಬ್ನ್ ಹಜರ್, ಬಿಗ್ವೀ ಮಾತ್ರವಲ್ಲದೆ ಇನ್ನಿತರ ಹಲವಾರು ವ್ಯಾಖ್ಯಾನಕಾರು ಗ್ರಂಥಗಳೂ ಈ ವಿವರಣೆಯನ್ನೇ ನೀಡಿದ್ದಾರೆ.

ಅಲ್ಲಾಹನ ವಿಧಿ-ನಿರ್ದೇಶನಗಳನ್ನು ಪಾಲಿಸುತ್ತಾ ಅಲ್ಲಾಹನ ಸಾಮೀಪ್ಯವನ್ನು ಹುಡುಕಬೇಕು. ನೀವೆಲ್ಲಿದ್ದರೂ ಅವನ ಸಂತೃಪ್ತಿ ಮತ್ತು ಸಾಮೀಪ್ಯವನ್ನು ಅವನು ನಿಮಗೆ ನಿರ್ದೇಶಿಸಿರುವ ಕಾರ್ಯಗಳನ್ನು ಶ್ರದ್ಧೆಯಿಂದ ನಿರ್ವಹಿಸುವ ಮೂಲಕ ಪಡೆಯಲು ಪ್ರಯತ್ನಿಸುತ್ತಿರಬೇಕು. ಪರಿಪೂರ್ಣ ಧರ್ಮವನ್ನು ಅವನು ನಿಮ್ಮ ಮುಂದಿಟ್ಟಿದ್ದಾನೆ. ನಮಾಝ್, ಉಪವಾಸ, ಝಕಾತ್ ಇತ್ಯಾದಿ.......

ಇದೇ ರೀತಿಯ ಆದೇಶವು ಕುರ್‌ಆನಿನಲ್ಲಿ ಇತರ ಸ್ಥಳದಲ್ಲೂ ಬಂದಿದೆ;

أُولٰئِكَ الَّـذِيْنَ يَدْعُوْنَ يَبْتَغُوْنَ اِلٰى رَبِّهِمُ الْوَسِيْلَةَ اَيُّهُمْ اَقْرَبُ وَيَرْجُوْنَ رَحْمَتَهٗ وَيَخَافُوْنَ عَذَابَهٗ•(سورة الاسراء، الآية٥٧)

**"ಇವರು ಯಾರನ್ನು ಪ್ರಾರ್ಥಿಸುತ್ತಿರುವರೊ ಅವರೇ ತಮ್ಮ ಪ್ರಭುವಿನ ಸಾಮೀಪ್ಯ ಹೊಂದಲಿಕ್ಕಾಗಿ ಮತ್ತು ಯಾರು ಅವನಿಗೆ ಹೆಚ್ಚು ನಿಕಟನಾಗುವನೆಂದು 'ಮಾರ್ಗೋಪಾಯ'ವನ್ನು ಅರಸುತ್ತಿರುವರು ಮತ್ತು ಅವರು ಅವನ ಕೃಪೆಯನ್ನು ಆಶಿಸುವವರೂ ಅವನ ಯಾತನೆಯನ್ನು ಭಯಪಡುವರೂ ಆಗಿರುತ್ತಾರೆ."**

ಇದೇ ಪ್ರಕಾರ ಅಲ್ಲಾಹ್‌ನ ಸಂದೇಶವಾಹಕರೂ(ಸ) ಅವರ ಸಹವರ್ತಿಗಳೂ ಈ ಸಾಧನವನ್ನು ಉಪಯೋಗಿಸಿಕೊಂಡು ಅಲ್ಲಾಹನ ಸಾಮೀಪ್ಯವನ್ನು ಸಂತೃಪ್ತಿಯನ್ನು ಪಡೆಯುತ್ತಿದ್ದರು. ಅವರನ್ನು ಅಲ್ಲಾಹನು ಗೌರವಿಸಿದರು. ಅಲ್ಲಾಹನು ನಿಶ್ಚಯಿಸಿರುವ ಧರ್ಮ ಉದಾ: ಜಿಹಾದ್, ಉಪವಾಸ, ನಮಾಝ್, ಝಿಕ್ರ್, ತಿಲಾವ್ ಇತ್ಯಾದಿಗಳು ಅವರು

ವಸೀಲವಾಗಿ ಉಪಯೋಗಿಸಿದ ಸಾಧನಗಳಾಗಿದೆ.

ಆದರೆ ಕೆಲವರು 'ವಸೀಲ' ಎಂದರೆ ಮೃತರಿಗೆ ಸಂಬಂಧಪಡುವ ಮತ್ತು ಔಲಿಯಾಗಳೊಂದಿಗೆ ಆಳವಾಗಿ ಹೇಳಿಕೊಳ್ಳುವುದೆಂದು ಭಾವಿಸಿಕೊಂಡಿದ್ದಾರೆ. ಇದೊಂದು ತಪ್ಪಾದ ಭಾವನೆಯಾಗಿದೆ. ಇದು ಮುಶ್ರಿಕರ ವಿಶ್ವಾಸಕ್ಕೆ ಪೂರಕವಾದ ಸಂಗತಿಯಾಗಿದೆ. ಈ ಕುರಿತು ಅಲ್ಲಾಹನು ಹೇಳುತ್ತಾನೆ.

**وَيَعْبُدُوْنَ مِنْ دُوْنِ اللّٰهِ مَالَايَضُرُّهُمْ وَلَايَنْفَعُهُمْ وَيَقُوْلُوْنَ هٰؤُلَاءِ شُفَعَآءُنَا عِنْدَ اللّٰهِ• (سورة يونس الآية١٨)**

**"ಅವರು ಅಲ್ಲಾಹನನ್ನು ಬಿಟ್ಟು ಇವರಿಗೆ ಲಾಭವನ್ನಾಗಲಿ, ನಷ್ಟವನ್ನಾಗಲಿ ಉಂಟು ಮಾಡದಂಥವರನ್ನು ಆರಾಧಿಸುತ್ತಾರೆ ಮತ್ತು ಇವರು ನಮ್ಮ ಶಿಫಾರಸ್ಸು ಮಾಡುವರು"** ಎಂದು ಹೇಳುತ್ತಾರೆ.

ಇವರ ಈ ಪ್ರವರ್ತನೆಯನ್ನು ಅಲ್ಲಾಹನು ತಿರಸ್ಕರಿಸುತ್ತಾ ಹೇಳುತ್ತಾನೆ,

**قُلْ اَتُنَبِّؤُنَ اللّٰهَ بِمَا لَايَعْلَمُ فِى السَّمٰوٰتِ وَلَافِى الْاَرْضِ سُبْحَانَهُ وَتَعَالٰى عَمَّا يُشْرِكُوْنَ•(سورة يونس، الآية١٨)**

ಓ ಪೈಗಂಬರರೇ, ಇವರೊಡನೆ ಹೇಳಿರಿ. **"ಅಲ್ಲಾಹನು ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ತಿಳಿಯದಂತಹಾ ಸುದ್ದಿಯನ್ನು ನೀವು ಅವನಿಗೆ ತಿಳಿಸುತ್ತೀರಾ? ಇವರು ಸಹಭಾಗಿಗಳನ್ನಾಗಿ ಮಾಡುತ್ತಿರುವವುಗಳಿಂದೆಲ್ಲ ಅವನು ಅತಿ ಪಾವನನಾಗಿರುತ್ತಾನೆ."**

## ಪರಿವಿಡಿ

"ನಿನ್ನ ಮೂಲಕ ಒಬ್ಬನು ಸತ್ಯಮಾರ್ಗವನ್ನು ಸ್ವೀಕರಿಸಿದರೆ,
ಅದು ನಿನ್ನ ಮಟ್ಟಿಗೆ ಈ ಲೋಕ ಮತ್ತು ಅದರಲ್ಲಿರುವ
ಎಲ್ಲಾ ವಸ್ತುಗಳಿಗಿಂತಲೂ ಉತ್ತಮ"

– ಪ್ರವಾದಿ ಮುಹಮ್ಮದ್(ಸ)


ಪ್ರಕಾಶಕರು

خيركم من تعلم القرآن و علمه

# ದಾವಾ ಪಬ್ಲಿಕೇಶನ್ಸ್

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ–ಗೋವಾ ಇದರ ಅಧೀನ ಸಂಸ್ಥೆ)



ಹಿರಾ ಕಾಂಪ್ಲೆಕ್ಸ್, 2–184/11, 2ನೇ ಬ್ಲಾಕ್,

ಕಾಟಿಪಳ್ಳ, ಮಂಗಳೂರು – 575 030

ಮೊಬೈಲ್ : 9986282449

E-mail : asshahadat@yahoo.co.in


₹. 60/–


– ಸಹಕಾರ –

**ಜಮೀಯತೆ ಅಹ್ಲೆಹದೀಸ್**

ಚಾಂದ್‌ವಾಡ–ಗೋವ